# ಮಾನಸಿ

ತಿಂಗಳ ಪತ್ರಿಕೆ

ಏಪ್ರಿಲ್ ಮತ್ತು ಮೇ : 1996



- ☆ ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದ ಕಾನೂನುಗಳ ಸುಧಾರಣೆ ಕುರಿತಂತೆ ಮನವಿ ಪತ್ರ
- ☆ ಸ್ತ್ರೀಯರ ಸಮಸ್ಯೆಗೆ ರಾಜಕೀಯ ಸ್ವರೂಪ
- ☆ ಇದು ಮಾನವ ಹಕ್ಕುಗಳ ದಮನವೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 11 ಸಂಚಿಕೆ : 3 ಮತ್ತು 4

ಏಪ್ರಿಲ್ ಮತ್ತು ಮೇ : 1996





ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067



| | | |
|---|---|---|
| ಸೂಚನೆ : | ಬಿಡಿ ಪ್ರತಿ | **3-00** ರೂ. |
| | ವಾರ್ಷಿಕ ಚಂದಾ | **25-00** ರೂ. |
| | ಆಜೀವ ಚಂದಾ | **300-00** ರೂ. |

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**



*ಓದುಗರಲ್ಲಿ*

ಹಲವಾರು ಕಾರಣಗಳಿಂದ ಮಾನಸದ ಪ್ರಕಟನೆ ನಿಧಾನವಾಗುತ್ತಿದೆ. ಏಪ್ರಿಲ್ ಮತ್ತು ಮೇ ಸಂಚಿಕೆಯನ್ನು ಒಟ್ಟಾಗಿ ಪ್ರಕಟಿಸುತ್ತಿದ್ದೇವೆ. ಈ ಅನಾನುಕೂಲಕ್ಕೆ ಓದುಗರು ಸಹಕರಿಸಬೇಕೆಂಬ ಮನವಿಯೊಂದಿಗೆ ಮುಂದಿನ ಸಂಚಿಕೆಗಳು ಕ್ರಮವಾಗಿ ಪ್ರಕಟವಾಗುತ್ತವೆಯೆಂಬ ಭರವಸೆಯನ್ನು ಓದುಗರಿಗೆ ನೀಡುತ್ತೇವೆ

- ಸಂ. ಮಂಡಳಿ


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಸಂಘಟಿತ ಹಾಗೂ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರು ಹಲವಾರು ವಿಶಿಷ್ಟವಾದ ಸಮಸ್ಯೆಗಳನ್ನು ಶತಮಾನಗಳಿಂದ ಎದುರಿಸುತ್ತಾ ಬಂದಿದ್ದಾರೆ. ನಮ್ಮ ಸಮಾಜದ ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಯೊಂದಿಗೆ ಮಹಿಳೆಯರು ಎದುರಿಸುವ ಸಮಸ್ಯೆಯ ಸ್ವರೂಪವೂ ಬದಲಾಗುತ್ತಾ ಬಂದಿದೆ. ಮಹಿಳೆಯರು ದುಡಿಯುವ ಕ್ಷೇತ್ರದಲ್ಲಿ ಎದುರಿಸುವ ಸಮಸ್ಯೆಗಳು ಒಂದು ಕಡೆ ಕಣ್ಣಿಗೆ ರಾಚುವಂತಿದ್ದರೆ, ಇನ್ನೊಂದು ಕಡೆ ನಾಜೂಕಾಗಿ ನಡೆಯುತ್ತಿದೆ.

ಮುಕ್ತ ಮಾರುಕಟ್ಟೆ ಹಾಗೂ ಖಾಸಗೀಕರಣದ ಪರಿಣಾಮವಾಗಿ ಮಹಿಳೆಯರು ಹೆಚ್ಚು ಹೆಚ್ಚು ಸೂಕ್ಷ್ಮ ಹಾಗೂ ಅಸಹಾಯಕ ಪರಿಸ್ಥಿತಿಯಲ್ಲಿ ಉಸಿರುಗಟ್ಟುವಂತೆ ಬದುಕಬೇಕಾಗಿದೆ. ಮುಕ್ತ ಮಾರುಕಟ್ಟೆಯ ನೆಪದಲ್ಲಿ ಅಂತರ ರಾಷ್ಟ್ರೀಯ ಮಾರುಕಟ್ಟೆ ಹಾಗೂ ಮಾನದಂಡದ ನೆಪದಲ್ಲಿ ಕಾರ್ಮಿಕರು ಕೆಲಸ ಕೊಳ್ಳುತ್ತಿರುವುದರ ಜೊತೆಗೆ ಕುಟುಂಬ ನಿರ್ವಹಣೆಯ ಸಂಪೂರ್ಣ ಹೊಣೆ ಮಹಿಳೆಯರ ಹೆಗಲ ಮೇಲೆ ಬೀಳುತ್ತಿದೆ. ತಾಂತ್ರಿಕ ಪರಿಣತಿ, ಹಾಗೂ ಯಾಂತ್ರೀಕರಣದ ನೆಪದಲ್ಲಿ ಸಂಘಟಿತ ಕ್ಷೇತ್ರ ಸ್ತ್ರೀಯರ ಅವಕಾಶಗಳನ್ನು ನಿರಾಕರಿಸಲಾಗುತ್ತಿದೆ.

ಖಾಸಗೀಕರಣದ ಪರಿಣಾಮವಾಗಿ ದುಡಿಯುವ ಮಹಿಳೆಯರು ಅಮಾನುಷವಾದ ಶೋಷಣೆಗೆ ಒಳಗಾಗುತ್ತಿದ್ದಾರೆ. ಮಾಲೀಕರ ಮರ್ಜಿಯಿಂದಲೇ ಬದುಕಬೇಕಾಗಿರುವ ಈ ಮಹಿಳೆಯರು ಎದುರಿಸುವ ಸಮಸ್ಯೆಗಳು ಅಪಾರ. ಕಡಿಮೆ ವೇತನ, ದೀರ್ಘಾವಧಿಯ ಕೆಲಸ, ರಜೆ ಪಡೆದರೆ ವೇತನದಲ್ಲಿ ಕಡಿತ, ಕೆಲಸದ ಅಭದ್ರತೆ, ವಿವಾಹಿತ ಸ್ತ್ರೀಯರನ್ನು ಕೆಲಸಕ್ಕೆ ತೆಗೆದುಕೊಳ್ಳಲು ನಿರಾಕರಿಸುವುದು, ಹೆರಿಗೆ ರಜೆ, ಹಾಗೂ ಭತ್ಯೆಯ ನಿರಾಕರಣೆ, ಭವಿಷ್ಯದಲ್ಲಿ ಭದ್ರತೆಯಿಲ್ಲದಿರುವುದು, ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರು ಎದುರಿಸುವ ಮೂಲಭೂತ ಸಮಸ್ಯೆಗಳು, ಸಂಘಟಿತ ಕ್ಷೇತ್ರದಲ್ಲಿ ಆರ್ಥಿಕ ಭದ್ರತೆಯಿದ್ದರೂ, ಸ್ತ್ರೀಯರೆಂಬ ತಾರತಮ್ಯಕ್ಕೆ, ಪಕ್ಷಪಾತಕ್ಕೆ ಒಳಗಾಗುತ್ತಿದ್ದಾರೆ.

ದುಡಿಯುವ ಕ್ಷೇತ್ರದಲ್ಲಿ ನಡೆಯುವ ಈ ಶೋಷಣೆ ಸಮಾಜದಲ್ಲಿ ಸ್ತ್ರೀಯರ ಬಗೆಗಿರುವ ಧೋರಣೆಯನ್ನು ಪ್ರತಿಬಿಂಬಿಸುತ್ತದೆ. ದುಡಿಯುವ ಮಹಿಳೆಯರು ವಿವಿಧ ಸ್ವರೂಪದ ಹಿಂಸೆಗೆ ಒಳಗಾಗುವ ಸಾಧ್ಯತೆಗಳು ಹೆಚ್ಚು. ಅತ್ಯಾಚಾರ, ಲೈಂಗಿಕ ಕಿರುಕುಳ ಮುಂತಾದ ಸಮಸ್ಯೆಗಳನ್ನು ಇವರು ಎದುರಿಸುತ್ತಾರೆ. ಜೊತೆಗೆ ಕುಟುಂಬದಲ್ಲೂ ಇಂತಹ ಕ್ರೌರ್ಯಕ್ಕೆ ತುತ್ತಾಗುತ್ತಾಳೆ. ಇದು ಒಂದು ರೀತಿಯಲ್ಲಿ ವಿಷ ಚಕ್ರ. ಸ್ತ್ರೀಯರ ಸಂಘಟಿತ ಪ್ರತಿರೋಧ ಮಾತ್ರದಿಂದ ಈ ಶೋಷಣೆಗೆ ಕಿಂಚಿತ್ತಾದರೂ ತಡೆಯೊಡ್ಡಬಹುದು.

- ಸಂಪಾದಕೀಯ ಮಂಡಳಿ

# ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದ ಕಾನೂನುಗಳ ಸುಧಾರಣೆ ಕುರಿತಂತೆ ಮನವಿ ಪತ್ರ

- ಸಿ. ಜಿ. ಮಂಜುಳ

*ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದ ಕಾನೂನುಗಳ ಸುಧಾರಣೆ ಕುರಿತಂತೆ ನವದೆಹಲಿಯ ಸ್ತ್ರೀವಾದಿ ಕಾನೂನು ಸಂಶೋಧನಾ ಕೇಂದ್ರದ ಪೋಮೊನಾ ಖನ್ನಾ ಹಾಗೂ ರತ್ನಾ ಕಪೂರ್ ಅವರು ಸಿದ್ಧಪಡಿಸಿರುವ ಮನವಿ ಪತ್ರ (1996ರ ಫೆಬ್ರುವರಿ 27)ದ ಮುಖ್ಯಾಂಶಗಳನ್ನು ಇಲ್ಲಿ ಸಂಕ್ಷಿಪ್ತ ರೂಪದಲ್ಲಿ ನೀಡಲಾಗಿದೆ.*

*ಈ ಮನವಿ ಪತ್ರ 6 ಭಾಗಗಳನ್ನು ಒಳಗೊಂಡಿದೆ. ಮನವಿ ಪತ್ರದ ಗುರಿಗಳು ಹಾಗೂ ವ್ಯಾಪ್ತಿಯನ್ನು ಮೊದಲ ಭಾಗ ವಿವರಿಸುತ್ತದೆ. 2ನೇ ಭಾಗ ಅತ್ಯಾಚಾರ ಹಾಗೂ ಮಕ್ಕಳ ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದಂತೆ ಭಾರತದಲ್ಲಿ ಈಗಿರುವ ಕಾನೂನು ಅವಕಾಶಗಳನ್ನು ವಿವರಿಸುತ್ತದೆ. ಇದರಲ್ಲಿನ ಮಿತಿಗಳ ಸಂಕ್ಷಿಪ್ತ ವಿಶ್ಲೇಷಣೆಯೂ ಇದೆ. 3ನೇ ಭಾಗ, 1992ರಲ್ಲಿ ರಾಷ್ಟ್ರೀಯ ಮಹಿಳಾ ಆಯೋಗ ನೇಮಕ ಮಾಡಿದ್ದ ತಾತ್ಕಾಲಿಕ ಉಪಸಮಿತಿ ಸೂಚಿಸಿರುವ ಉದ್ದೇಶಿತ ಕಾನೂನು ಸುಧಾರಣೆಗಳನ್ನು ವಿವರಿಸುತ್ತದೆ. ಈ ಶಿಫಾರಸುಗಳ ಅನುಕೂಲ ಹಾಗೂ ಮಿತಿಗಳೆರಡನ್ನೂ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಮಕ್ಕಳ ಮೇಲಿನ ಲೈಂಗಿಕ ಅಪರಾಧಗಳನ್ನು ಕುರಿತು ಈಗಿರುವ ಕಾನೂನು ಅವಕಾಶಗಳು, ಅದರ ಮಿತಿಗಳನ್ನು ಕುರಿತು 4ನೇ ಭಾಗದಲ್ಲಿ ಚರ್ಚಿಸಲಾಗಿದೆ. 5ನೇ ಭಾಗದಲ್ಲಿ ಲೈಂಗಿಕ ಅಪರಾಧ ಕುರಿತ ಉದ್ದೇಶಿತ ಕರಡು ವಿಧೇಯಕವನ್ನು ವಿವರಿಸಲಾಗಿದೆ. 6ನೇ ಭಾಗದಲ್ಲಿ ಕಿರಿಯರು ಹಾಗೂ ಮಕ್ಕಳ ಮೇಲಿನ ಲೈಂಗಿಕ ಅಪರಾಧ ಕುರಿತಂತೆ ಉದ್ದೇಶಿತ ಕರಡು ವಿಧೇಯಕದಲ್ಲಿರುವ ಅವಕಾಶಗಳನ್ನು ವಿವರಿಸಲಾಗುವುದು.*

ಮಹಿಳೆಯರ ಮೇಲಿನ ಲೈಂಗಿಕ ಅಪರಾಧದ ವಿಚಾರದ ಚರ್ಚೆ ಸಮಕಾಲೀನ ಮಹಿಳಾ ಚಳವಳಿಯ ಮಂಚೂಣಿಯಲ್ಲಿದೆ. ಈ ಕ್ಷೇತ್ರದಲ್ಲಿ ಗಣನೀಯ ಕಾನೂನು ಸುಧಾರಣೆಗೂ ಇದು ಅವಕಾಶ ಮಾಡಿಕೊಟ್ಟಿದೆ. 1980ರ ದಶಕದ ಮಧ್ಯಭಾಗದಲ್ಲಿ ಜಾರಿಗೊಳಿಸಲಾದ ಅತ್ಯಾಚಾರ ಕಾನೂನುಗಳ ಸುಧಾರಣೆ - ಮಹಿಳೆಯರು ಪಡೆದ ಶಾಸನಾತ್ಮಕ ಗಳಿಕೆ ದೃಷ್ಟಿಯಿಂದ ಮುಖ್ಯವಾದುದಾಗಿತ್ತು. ಅಲ್ಲದೆ ಕಡಿಮೆ ಸಾರ್ವಜನಿಕ ಗಮನ ಪಡೆದ ವಿಚಾರಗಳ ಸುತ್ತ ಮಹಿಳೆಯರನ್ನು ಸಂಘಟಿಸುವಲ್ಲಿ ಹಾಗೂ ಜಾಗೃತಿ ಮೂಡಿಸುವಲ್ಲಿ ಕಾನೂನು ಪ್ರಚಾರಗಳ ಪ್ರಾಮುಖ್ಯತೆಯನ್ನು ಪ್ರದರ್ಶಿಸಿತ್ತು. ಹೀಗಿದ್ದೂ, ಇಂತಹ ಪ್ರಚಾರಗಳು, ಅತ್ಯಾಚಾರವನ್ನು ಮಹಿಳೆಯರ ಲೈಂಗಿಕ ನೈತಿಕತೆ ಹಾಗೂ ಪುರುಷನ ಆಸ್ತಿ ಹಕ್ಕಿಗೆ ಸಂಬಂಧಿಸಿದ ರೀತಿಯ ಅಪರಾಧವಾಗಿಯಷ್ಟೇ ಅರ್ಥಮಾಡಿಕೊಳ್ಳುವ ದೃಷ್ಟಿಯನ್ನು ಬದಲಿಸಿಲ್ಲ.

ಈ ಮನವಿ ಪತ್ರ ಈಗಿರುವ ಅತ್ಯಾಚಾರ ಕಾನೂನು ಆಧರಿಸಿರುವ ಸಂಗತಿಗಳನ್ನು ವಿಶ್ಲೇಷಿಸುತ್ತದೆ. ಅಲ್ಲದೆ ಹೆಂಗಸಿನ ದೇಹದ ಸಮಗ್ರತೆ ಹಾಗೂ ಲೈಂಗಿಕ ಸ್ವಾಯತ್ತತೆಗೆ ಮಹಿಳೆಯ ಹಕ್ಕನ್ನು ಗುರುತಿಸುವ ಕಾನೂನಿನ ಪರವಾದ ವಾದವನ್ನು ಮಂಡಿಸುತ್ತದೆ. "ಸ್ತ್ರೀವಾದಿ ಕಾನೂನು ಸಂಶೋಧನೆಯ ಕೇಂದ್ರದ ಸದಸ್ಯರಾಗಿ ರಾಷ್ಟ್ರೀಯ ಮಹಿಳಾ ಆಯೋಗದ ತಾತ್ಕಾಲಿಕ ಉಪ ಸಮಿತಿ ಕೈಗೊಂಡ ಪ್ರಥಮ ಯತ್ನದ ಮುಂದುವರಿಕೆಯಾಗಿದೆ ಇದು" ಎಂದೂ ಮನವಿ ಪತ್ರದ ಆರಂಭದಲ್ಲಿ ಪ್ರತಿಪಾದಿಸಲಾಗಿದೆ. ಉಪಸಮಿತಿ ಮಂಡಿಸಿದ ಕರಡು ವರದಿಯನ್ನು ಪರಿಶೀಲಿಸಿ ಅದರ ಬಲ ಹಾಗೂ ಮಿತಿಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಲೈಂಗಿಕ ಹಲ್ಲೆ ಮತ್ತು ಮಕ್ಕಳು-ಹದಿಹರೆಯದವರ ವಿರುದ್ಧದ ಲೈಂಗಿಕ ಹಿಂಸಾಚಾರ ಕುರಿತಂತೆ ಹೊಸ ಶಾಸನಾತ್ಮಕ ಕರಡುಗಳನ್ನು ಈ ಮನವಿ ಪತ್ರದ ಅಂತಿಮ ವಿಭಾಗದಲ್ಲಿ ಸೇರಿಸಲಾಗಿದೆ.

ಮನವಿ ಪತ್ರದ ವ್ಯಾಪ್ತಿ : ಲೈಂಗಿಕ ಅಪರಾಧಗಳಿಗೆ ವಿಶೇಷವಾಗಿ ಸಂಬಂಧಿಸಿದಂತೆ ಈಗಿರುವ ಕಾನೂನು ವ್ಯವಸ್ಥೆಯೊಳಗಡೆಯೇ ಮಹಿಳೆಯರಿಗೆ ಸಮಾನತೆ ತರಲು ಅಗತ್ಯ ಸುಧಾರಣೆಗಳನ್ನು ಈ ಮನವಿಪತ್ರ ಶಿಫಾರಸು ಮಾಡುತ್ತದೆ.

ಮಹಿಳೆಯರ ವಿರುದ್ಧದ ಎಲ್ಲಾ ಬಗೆಯ ತಾರತಮ್ಯ ನಿವಾರಣೆ (ಸಿಡಾ) ನಿರ್ಣಯವನ್ನು ಭಾರತ ಸರ್ಕಾರ ಅಂಗೀಕರಿಸಿರುವುದರಿಂದ ಆ ಪ್ರಕಾರ ಮಹಿಳೆಯರಿಗೆ ಸಾಕಷ್ಟು ಸಮಾನತೆಗೆ ಬದ್ಧವಾಗಿರುವುದರಿಂದ ಈ ಶಿಫಾರಸುಗಳನ್ನು ಮಾಡಲಾಗಿದೆ. ಅತ್ಯಾಚಾರ ಹಾಗೂ ಮಕ್ಕಳ ಲೈಂಗಿಕ ಅಪರಾಧಕ್ಕೆ ಸಂಬಂಧಿಸಿದಂತೆ ಈಗಿರುವ ಕಾನೂನುಗಳ ತಿದ್ದುಪಡಿ/ಸುಧಾರಣೆಗೆ ನಿರ್ದಿಷ್ಟ ಶಿಫಾರಸುಗಳನ್ನು ಮಾಡಲಾಗಿದೆ.

ಮಹಿಳೆಯರು, ಮಕ್ಕಳು ಹಾಗೂ ಹದಿಹರೆಯದವರ ಮೇಲೆ ಪುರುಷರು ನಡೆಸುವ ಹಿಂಸಾಚಾರವನ್ನು ಹತ್ತಿಕ್ಕಲು ಕಾನೂನುಗಳು ವಿಫಲವಾಗಿವೆ ಎಂಬುದರ ಸತತ ಅನುಭವವನ್ನು ಆಧರಿಸಿ ಈ ಶಿಫಾರಸುಗಳನ್ನು ಮಾಡಲಾಗಿದೆ. ಮಹಿಳೆಯರ ದಾಸ್ಯದ ಪುನರ್‌ಸೃಷ್ಟಿ ಹಾಗೂ ಪುನರ್‌ಜೀವಗೊಳಿಸುವಿಕೆಯ ಕ್ರಿಯೆಯಲ್ಲಿ ಕಾನೂನು ವ್ಯವಸ್ಥೆಯೇ ಪ್ರಮುಖ ಪಾತ್ರ ವಹಿಸಿದೆ. ಈ ನೆಲೆಗಳು ಹಾಗೂ ಕಾನೂನಿನ ಪಾತ್ರವನ್ನು ಕುರಿತು ಈ ಮನವಿ ಪತ್ರದಲ್ಲಿ ಚರ್ಚಿಸಲಾಗಿದೆ.

ಅತ್ಯಾಚಾರ ಹಾಗೂ ಲೈಂಗಿಕ ಅಪರಾಧ ಕುರಿತ ಕಲ್ಪನೆಗಳನ್ನು (ಮಿಥ್) ಬದಲಿಸುವ ಪ್ರಕ್ರಿಯೆಯಲ್ಲಿ ಅಪರಾಧ ನ್ಯಾಯ ವ್ಯವಸ್ಥೆ ಗಣನೀಯ ಪಾತ್ರ ವಹಿಸಬಹುದು ಎಂಬ ನಂಬಿಕೆಯಿಂದ ಈ ಮನವಿ ಪತ್ರ ಸಿದ್ಧಪಡಿಸಲಾಗಿದೆ. ಇಂತಹ ಪ್ರಕರಣಗಳಲ್ಲಿ ಪ್ರಾಸಿಕ್ಯೂಟರ್‌ಗಳು ವಿಚಾರಗಳನ್ನು ವಿಶ್ಲೇಷಿಸಿ ಮಂಡಿಸುವ ರೀತಿಯನ್ನು ಬದಲಿಸುವುದು ಹಾಗೂ ಕಲ್ಪನೆಗಳನ್ನು ತೊರೆದು ಕಾನೂನು ಆಧರಿಸಿದ ವಿಶ್ಲೇಷಣೆ ರೂಪಿಸುವುದು ಇದರ ಉದ್ದೇಶ. ಈ ಪ್ರಕ್ರಿಯೆ, ಅತ್ಯಾಚಾರ ಹಾಗೂ ಲೈಂಗಿಕ ಅಪರಾಧಗಳನ್ನು ಸಮಾಜ ಗ್ರಹಿಸಿ, ಅರ್ಥ ಮಾಡಿಕೊಳ್ಳುವ ರೀತಿಯಲ್ಲಿ ಬದಲಾವಣೆ ತರಬಹುದು, ಈ ಸ್ಥಿತ್ಯಂತರ ತರುವುದು ಹೇಗೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದಕ್ಕಾಗಿ ಅತ್ಯಾಚಾರ-ಲೈಂಗಿಕ ಅಪರಾಧ ಕುರಿತು ಈಗಿರುವ ವಿವರಣೆಗಳು ಹಾಗೂ ಉದ್ದೇಶಿತ ಕಾನೂನಿನ ವಿವರಗಳನ್ನು ಸುದೀರ್ಘವಾಗಿ ಪರಿಶೀಲಿಸುವುದು ಅವಶ್ಯ.

**ಪರಾಮರ್ಶೆ ಪರಿಕರಗಳು :** ಈ ಮನವಿ ಪತ್ರದಲ್ಲಿರುವ ಶಿಫಾರಸುಗಳು ಭಾರತೀಯ ಮಹಿಳೆಯರ ಅನುಭವಗಳನ್ನು ಆಧರಿಸಿದೆ. ಮಹಿಳೆಯರ ಕುರಿತ ಲೈಂಗಿಕ ಅಪರಾಧಗಳನ್ನು ಕುರಿತು ಇರುವ ಈಗಿರುವ ಕಾನೂನುಗಳ ಪರಿಣಾಮಗಳನ್ನು ಕುರಿತು ವಿಶ್ಲೇಷಿಸುವ ಸಮಕಾಲೀನ ಸಂಶೋಧನೆಯನ್ನು ಆಧರಿಸಿದೆ. ಇದಲ್ಲದೆ, ಇಂತಹದೇ ಸಮಸ್ಯೆಗಳನ್ನು ಅನುಭವಿಸಿದ ಬೇರೆ ಸ್ಥಳಗಳಲ್ಲಿ ಉದ್ದೇಶಿಸಲಾದ ಅಥವಾ ಅನುಷ್ಠಾನಗೊಳಿಸಲಾದ ಸುಧಾರಣೆಗಳನ್ನು ಇದು ಆಧರಿಸಿದೆ. ಇವುಗಳ ವಿವರ ಹೀಗಿದೆ:

**ಫಿಜಿ :** ಫಿಜಿ ಮಹಿಳಾ ಹಕ್ಕುಗಳ ಚಳವಳಿ ಈಗಿರುವ ಕಾನೂನು ಹಾಗೂ ಕಾನೂನು ಸುಧಾರಣೆಗೆ ನೀಡಿರುವ ಪ್ರಸ್ತಾವನೆಗಳು.

**ಧಿ ಲಾ ಫಾರ್ ಪೆಸಿಫಿಕ್ ವಿಮೆನ್ :** ಎ ಲೀಗಲ್ ರೈಟ್ಸ್ ಹ್ಯಾಂಡ್‌ಬುಕ್, ಇಮ್ರಾನಾ ಜಲಾಲ್ (ಫಿಜಿ ಮಹಿಳಾ ಹಕ್ಕುಗಳ ಚಳವಳಿ, 1995)

**ಫಿಲಿಪ್ಪೀನ್ಸ್ :** ಫಿಲಿಪ್ಪೀನ್ಸ್ ಕಾಂಗ್ರೆಸ್ ಮುಂದೆ ಮಂಡಿಸಲಾದ ಅತ್ಯಾಚಾರ ಕಾನೂನಿನ ಉದ್ದೇಶಿತ ಸುಧಾರಣೆಗಳು, 1995.

**ಥಾಯ್‌ಲೆಂಡ್ :** ಮಹಿಳಾ ಗುಂಪುಗಳ ಜತೆಗಿನ ಸಮಾಲೋಚನೆಯೊಂದಿಗೆ ಫ್ರೆಂಡ್ಸ್ ಆಫ್ ವಿಮೆನ್ ಸಿದ್ಧಪಡಿಸಿರುವ 1990ರ ಅತ್ಯಾಚಾರ ಕಾನೂನು ವಿವರಣೆ ತಿದ್ದುಪಡಿಗೆ ಪ್ರಸ್ತಾವನೆಗಳು.

**ಬ್ರಿಟನ್ :** 1994ರ ಕ್ರಿಮಿನಲ್ ಜಸ್ಟೀಸ್ ಅಂಡ್ ಪಬ್ಲಿಕ್ ಆರ್ಡರ್ ಕಾಯಿದೆಯಲ್ಲಿ ಪ್ರಸ್ತುತವಾದ ಅಂಶಗಳು.

**ಆಸ್ಟ್ರೇಲಿಯಾ :** ಅತ್ಯಾಚಾರ ರೂಪದ ಅಪರಾಧಗಳು, ಇತರ ಲೈಂಗಿಕ ಹಲ್ಲೆಗೆ ಸಂಬಂಧಿಸಿದ ಅಪರಾಧಗಳು, ಅಪರಾಧ ಕಾಯಿದೆ 1900, ನಂ. 40, ನ್ಯೂ ಸೌತ್ ವೇಲ್ಸ್, 1994ರ ಕಾಯಿದೆವರೆಗೆ ನಂ. 95ವರೆಗೆ ಎಲ್ಲಾ ತಿದ್ದುಪಡಿಗಳನ್ನು ಒಳಗೊಳ್ಳುವಂತೆ 1995ರ 2ನೇ ಮಾರ್ಚಿಯಲ್ಲಿ ಮರುಮುದ್ರಿತ.

**ನ್ಯೂಜಿಲೆಂಡ್ :** 1961ರ ಅಪರಾಧ ಕಾಯಿದೆ ಹಾಗೂ 1957ರ ಸಮ್ಮರಿ ಪ್ರೊಸೀಡಾನ್ಸ್ ಆಕ್ಟ್ - ತಿದ್ದುಪಡಿಗಳೊಂದಿಗೆ.

**ಕೆನಡಾ :** ಅಪರಾಧ ಕಾನೂನು ತಿದ್ದುಪಡಿ ಕಾಯಿದೆ.

**ಅಮೆರಿಕ :** 1994ರ ಮಹಿಳೆಯರ ವಿರುದ್ಧದ ಹಿಂಸಾಚಾರ ಕಾಯಿದೆ.

ವಿವಿಧ ವಲಯಗಳ ಅನುಭವಗಳನ್ನು ಆಧರಿಸಿ ಈ ದಸ್ತಾವೇಜು ಸಿದ್ಧಪಡಿಸಿರುವುದರಿಂದ ಇದು ಲೈಂಗಿಕ ಅಪರಾಧಗಳನ್ನು ಕುರಿತ ಕಾನೂನುಗಳ ಸುಧಾರಣೆಗೆ ಲಾಬಿ ನಡೆಸುತ್ತಿರುವ ಏಷ್ಯಾ-ಪೆಸಿಫಿಕ್ ವಲಯದ ಅದರಲ್ಲೂ

ವಿಶೇಷವಾಗಿ ಭಾರತೀಯ ಮಹಿಳೆಯರಿಗೆ ಉಪಯುಕ್ತ ಸಂಪನ್ಮೂಲ ಪರಿಕರವಾಗಬಹುದೆಂದು ಮನವಿ ಪತ್ರದಲ್ಲಿ ಆಶಿಸಲಾಗಿದೆ.

**ಭಾರತದಲ್ಲಿ ಈಗಿರುವ ಶಾಸನ :** ಅತ್ಯಾಚಾರ ಹಾಗೂ ಅದರ ಶಿಕ್ಷೆಗೆ ಸಂಬಂಧಿಸಿದಂತೆ ಇರುವ ಕಾನೂನಿನ ಅವಕಾಶಗಳು ಭಾರತೀಯ ಅಪರಾಧ ಸಂಹಿತೆ (1860ರ ಕಾಯಿದೆ ಸಂಖ್ಯೆ 45)ಯ 'ಮಾನವ ದೇಹಕ್ಕೆ ಸಂಬಂಧಿಸಿದ ಅಪರಾಧಗಳು' ಎಂಬ 16ನೇ ಅಧ್ಯಾಯದಲ್ಲಿ ಕಾಣಸಿಗುತ್ತದೆ.

375ನೇ ವಿಧಿಯಲ್ಲಿ ಅತ್ಯಾಚಾರದ ವಿವರಣೆ ಹೀಗೆ ನೀಡಲಾಗಿದೆ.

ಕೆಳಕಂಡ ಯಾವುದೇ ವಿವರಣೆ ವ್ಯಾಪ್ತಿಗೆ ಬರುವ ಸಂದರ್ಭಗಳಲ್ಲಿ ಪುರುಷ ಮಹಿಳೆಯ ಜತೆ ಸಂಭೋಗ ನಡೆಸಿದ್ದಲ್ಲಿ ಅದು 'ಅತ್ಯಾಚಾರ'ವೆನಿಸುತ್ತದೆ.

ಮೊದಲಿಗೆ : ಆಕೆಯ ಇಚ್ಛೆಗೆ ವಿರುದ್ಧವಾಗಿ

ಎರಡನೆಯದಾಗಿ : ಆಕೆಯ ಒಪ್ಪಿಗೆ ಇಲ್ಲದೆ

ಮೂರನೆಯದಾಗಿ : ಆಕೆಯ ಒಪ್ಪಿಗೆ ಜತೆ, ಆದರೆ ಆಕೆ ಅಥವಾ ಆಕೆಗೆ ಸಂಬಂಧಿಸಿದ ವ್ಯಕ್ತಿಗೆ ಸಾವು ಅಥವಾ ನೋವು ಉಂಟುಮಾಡುವ ಭೀತಿ ಹುಟ್ಟಿಸಿ ಒಪ್ಪಿಗೆ ಪಡೆದಿದ್ದಲ್ಲಿ

ನಾಲ್ಕನೆಯದಾಗಿ : ಆಕೆಯ ಒಪ್ಪಿಗೆ ಜತೆಗೆ, ತಾನು ಆಕೆಯ ಪತಿಯಲ್ಲ ಎಂಬುದು ಆತನಿಗೆ ತಿಳಿದಿದ್ದಾಗ್ಯೂ, ತಾನು ಕಾನೂನುಬದ್ಧವಾಗಿ ವಿವಾಹವಾಗಿರುವ ಮನುಷ್ಯನೆಂದು ಆಕೆ ನಂಬಿಕೊಂಡು ಒಪ್ಪಿಗೆ ನೀಡಿದ್ದ ಸಂದರ್ಭದಲ್ಲಿ

ಐದನೆಯದಾಗಿ : ಆಕೆಯ ಒಪ್ಪಿಗೆ ಮೇರೆಗೆ, ಆದರೆ ಅಂತಹ ಒಪ್ಪಿಗೆ ನೀಡುವ ಸಂದರ್ಭದಲ್ಲಿ, ಮನಸ್ಸಿನ ಅಸ್ವಸ್ಥತೆ ಅಥವಾ ಮಾದಕ ವಸ್ತುವಿನ ಪ್ರಭಾವದಲ್ಲಿದ್ದಲ್ಲಿ ಅಥವಾ ಆತನೇ ವೈಯಕ್ತಿಕವಾಗಿ ಅಥವಾ ಬೇರೆ ಯಾರಾದರೂ ವ್ಯಕ್ತಿಯ ಮೂಲಕ ಮತ್ತು ಬರಿಸುವ ವಸ್ತುವನ್ನು ನೀಡಿ, ಅದರ ಪರಿಣಾಮಗಳನ್ನರಿಯದೆ ಒಪ್ಪಿಗೆ ನೀಡಿದ್ದಲ್ಲಿ.

ಆರನೆಯದಾಗಿ : ಆಕೆ 16 ವರ್ಷಕ್ಕಿಂತ ಕಡಿಮೆ ವಯಸ್ಸಿನವಳಾಗಿದ್ದಲ್ಲಿ ಆಕೆಯ ಒಪ್ಪಿಗೆ ಇರಲಿ ಅಥವಾ ಬಿಡಲಿ.

ವಿವರಣೆ - ಅತ್ಯಾಚಾರ ಅಪರಾಧಕ್ಕೆ ಅಗತ್ಯವಾದ ಲೈಂಗಿಕ ಸಂಪರ್ಕಕ್ಕೆ ಕೂಡುವಿಕೆ (Penetration) ಸಾಕು.

ಹೊರತಾದದು - ತನ್ನದೇ ಸ್ವಂತ ಪತ್ನಿಯೊಂದಿಗೆ, ಆ ಪತ್ನಿ 15 ವರ್ಷಕ್ಕಿಂತ ಕಡಿಮೆ ವಯಸ್ಸಿನವಳಾಗಿರದಿದ್ದಲ್ಲಿ ವ್ಯಕ್ತಿ ನಡೆಸುವ ಲೈಂಗಿಕ ಸಂಪರ್ಕ ಅತ್ಯಾಚಾರವಾಗುವುದಿಲ್ಲ.

**ಕಾನೂನಿನಲ್ಲಿ ಈಗಿರುವ ಅವಕಾಶಗಳ ವಿಶ್ಲೇಷಣೆ :**

ಅತ್ಯಾಚಾರ : ಕಾನೂನಿನಲ್ಲಿ ಈಗಿರುವ ವಿವರಣೆಯ ಪ್ರಕಾರ, ಅತ್ಯಾಚಾರ ಅಪರಾಧಕ್ಕೆ ಎರಡು ಮೂಲ ಅಂಶಗಳು ಅಗತ್ಯ - ಇವು :

i) ಶಿಶ್ನದ ಮೂಲಕ ಕೂಡುವಿಕೆ (Penetration) ಆಗಿದೆ ಎಂಬುದರ ಸಾಕ್ಷ್ಯ.

ii) ದೂರು ನೀಡಿದಾಕೆಯಿಂದ ಒಪ್ಪಿಗೆ ಇರಲಿಲ್ಲ ಎಂಬುದರ ಪ್ರಮಾಣ.

ಈ ಎರಡೂ ಅಂಶಗಳು ಇಲ್ಲದಿದ್ದಲ್ಲಿ ಅತ್ಯಾಚಾರ ಅಪರಾಧ ಸಾಬೀತಾಗುವುದಿಲ್ಲ. ಈ ಎರಡೂ ಅಂಶಗಳು ದೂರು ನೀಡಿದಾಕೆಯ ವಿರುದ್ಧವೇ ಕಾರ್ಯ ನಿರ್ವಹಿಸುವಂತಹ ಕೆಲವು ಕಲ್ಪನೆಗಳ ಮೇಲೆ ರೂಪಿತವಾಗಿದ್ದು, ಅತ್ಯಾಚಾರ ನಡೆದದ್ದನ್ನು ಸಾಬೀತು ಪಡಿಸುವುದು ಕಷ್ಟವಾಗುತ್ತದೆ.

ಒಪ್ಪಿಗೆ : ಅತ್ಯಾಚಾರ ವಿಚಾರಣೆಯಲ್ಲಿ ಒಪ್ಪಿಗೆ ಎನ್ನುವುದು ಮಹತ್ವದ ವಿಚಾರವಾಗಿರಬೇಕಾದ್ದಿಲ್ಲ, ಒಪ್ಪಿಗೆ ಅಗತ್ಯದ ವಿಚಾರವನ್ನು ಕಾನೂನುಬದ್ಧ ಹಾಗೂ ಅಕ್ರಮ ಲೈಂಗಿಕ ಚಟುವಟಿಕೆ ಮಧ್ಯದ ವ್ಯತ್ಯಾಸವನ್ನು ತೋರಲು ಬಳಸಲಾಗುವುದು. ಒಪ್ಪಿಗೆ ಇರಲಿಲ್ಲ ಎಂದರೆ ಲೈಂಗಿಕ ಸಂಭೋಗಕ್ಕೆ ಮಹಿಳೆ ಒಪ್ಪಿರಲಿಲ್ಲವೆಂದಷ್ಟೇ ಅರ್ಥವಾಗಬೇಕು.

ಆದರೆ, ನ್ಯಾಯಪೀಠ ವ್ಯಾಖ್ಯಾನಿಸುವ ಕಾನೂನು ಅತ್ಯಾಚಾರಕ್ಕೊಳಗಾದ ಮಹಿಳೆ ವಿರುದ್ಧವೇ 'ಒಪ್ಪಿಗೆ'ಯ ವಿಚಾರ ಕೆಲಸ ಮಾಡುತ್ತದೆ. ಕಾನೂನಿನ ಕಣ್ಣಲ್ಲಿ ಒಪ್ಪಿಗೆ ವಿಚಾರಕ್ಕೆ ಮೂರು ವಿಭಿನ್ನ ಅಂಶಗಳಿವೆ :

i. ಪ್ರತಿರೋಧದ ಸಾಕ್ಷ್ಯ
ii. ಹಿಂದಿನ ಲೈಂಗಿಕ ನಡತೆ
iii. ರುಜುವಾತು ಪಡಿಸುವಿಕೆ

**i. ಪ್ರತಿರೋಧದ ಸಾಕ್ಷ್ಯ :** ಮಹಿಳೆಯ ಒಪ್ಪಿಗೆ ಇಲ್ಲದೇ ಲೈಂಗಿಕ ಸಂಭೋಗ ನಡೆದಿದೆ ಎಂಬುದು ಕಾನೂನಿನ ಕಣ್ಣಲ್ಲಿ ಅಗತ್ಯ. ಮಹಿಳೆ 'ಬೇಡ' ಎಂದಾದಲ್ಲಿ 'ಬೇಡ' ಎಂಬುದಷ್ಟೇ ಇದರ ಅರ್ಥವಾಗಬೇಕು. ಆದರೆ ನ್ಯಾಯಾಲಯಗಳು ಬರೀ

ಬೇಕು ಅಥವಾ ಬೇಡ ಎಂಬುದನ್ನಷ್ಟೇ ಪರಿಗಣಿಸುವುದಿಲ್ಲ, ಇದಕ್ಕಾಗಿ ದೂರು ನೀಡುವ ವ್ಯಕ್ತಿ ತೋರಿರಬಹುದಾದ ಪ್ರತಿರೋಧ ಬಹಳಷ್ಟು ಪ್ರಕರಣಗಳ ಇತ್ಯರ್ಥದಲ್ಲಿ ಮಹತ್ವದ ವಿಚಾರವಾಗುತ್ತದೆ. ಮಹಿಳೆ ತೋರಿರುವ ಪ್ರತಿರೋಧ ಸಾಕಷ್ಟಿಲ್ಲ ಎಂದು ನ್ಯಾಯಾಧೀಶರಿಗೆ ಎನಿಸಿದರೆ, ಆರೋಪಿಯ ವರ್ತನೆ, ಸ್ಥಾನಮಾನವನ್ನು ಮೀರಿ ಬಹಳಷ್ಟು ಪ್ರಕರಣಗಳಲ್ಲಿ ಆತನನ್ನು ಬಿಡುಗಡೆ ಮಾಡಲಾಗುತ್ತದೆ. ಶಿಕ್ಷೆ ವಿಧಿಸಿದರೂ ಶಿಕ್ಷೆಯ ಪ್ರಮಾಣ ಕಡಿಮೆ ಆಗಿರುತ್ತದೆ. ಇದರಲ್ಲಿರುವ ಕಲ್ಪನೆ ಎಂದರೆ, ಮಹಿಳೆಯರು ತಮ್ಮ ಲೈಂಗಿಕ ಆಕಾಂಕ್ಷೆಗಳ ಬಗ್ಗೆ ಗೊಂದಲಗೊಂಡಿರುತ್ತಾರೆ. ತಮಗೆ "ಬೇಕು" ಎನಿಸಿದಾಗಲೂ ಅವರು "ಬೇಡ" ಎನ್ನಬಹುದು. ಹೀಗಾಗಿ "ಬೇಡ" ಎಂಬುದಾಗಿದ್ದಲ್ಲಿ ದೈಹಿಕ ಪ್ರತಿರೋಧಕವಿರಬೇಕು. ಇದನ್ನು ಸಾಬೀತು ಮಾಡುವ ಸಾಕ್ಷಿಗಳೂ ಇರಬೇಕು. ಇಲ್ಲದಿದ್ದಲ್ಲಿ ದೂರು ನೀಡಿದ ವ್ಯಕ್ತಿ ಒಪ್ಪಿರಬೇಕು ಎಂದು ಅರ್ಥವಾಗುತ್ತದೆ.

ಮಹಿಳೆಯರು ದುರ್ಬಲರು ಮತ್ತು ಬಲವಿಲ್ಲದವರು ಎಂಬ ನೆಲೆಯ ಮೇಲೆ ಜಾರಿಯಲ್ಲಿರುವ ಅನೇಕ ಸಾಮಾಜಿಕ ಆಚರಣೆಗಳನ್ನು ಸಮಾಜ ಸಮರ್ಥಿಸಿಕೊಳ್ಳುತ್ತದೆ, ಆದರೆ ಲೈಂಗಿಕತೆ ವಿಚಾರದಲ್ಲಿ ಅವರು ಬಲವಾಗಿರಬೇಕು ಎಂದು ನಿರೀಕ್ಷಿಸುವುದು ಮಾತ್ರ ಬಹು ದೊಡ್ಡ ವ್ಯಂಗ್ಯ. 'ಪ್ರತಿರೋಧ ಅಗತ್ಯ'ದ ವಿಚಾರವನ್ನು ನಿರ್ಧರಿಸುವಲ್ಲಿಯೂ ಪುರುಷರ ವ್ಯಕ್ತಿತ್ವ ಗಮನಿಸುವುದಿಲ್ಲ. ಆದರೆ ಮಹಿಳೆ ಮತ್ತು ಆಕೆಯ ಚಾರಿತ್ರ್ಯ ಸರಿಯಿಲ್ಲದ ವಿಚಾರವನ್ನು ವಿಮರ್ಶಿಸಿ ನಿರ್ಧರಿಸಲಾಗುವುದು. ಇದರ ಅರ್ಥ, ಮಹಿಳೆಯ ಚಾರಿತ್ರ್ಯ ಮತ್ತು ವರ್ತನೆಯನ್ನು ಅತ್ಯಾಚಾರದ ಸಂದರ್ಭ ಮತ್ತು ನ್ಯಾಯಾಲಯದ ಕೊಠಡಿ ಗಳೆರಡರಲ್ಲೂ ಕೂಲಂಕಷವಾಗಿ ಪರಿಶೀಲನೆಗೊಳಗಾಗುತ್ತದೆ. ಶೀಲವಂತ ಮಹಿಳೆ ವರ್ತಿಸಬೇಕಾದ ರೀತಿಯಲ್ಲಿ ಆಕೆ ವರ್ತಿಸಲಿಲ್ಲ ಎಂದು ನ್ಯಾಯಾಧೀಶರು ಆಲೋಚಿಸಿದಲ್ಲಿ, ಆಕೆಯೇ ಬಯಸಿದ್ದುದಾಗಿ ಅಥವಾ ಒಪ್ಪಿದ್ದುದಾಗಿ ಭಾವಿಸಲಾಗುತ್ತದೆ.

ಪ್ರತಿರೋಧ ಅಗತ್ಯ ವಿಚಾರದಲ್ಲಿ ಇರುವ ಮತ್ತೊಂದು ಸಮಸ್ಯೆ ಎಂದರೆ ಬಹುತೇಕ ಪುರುಷರಿಗಿಂತ ಮಹಿಳೆಯರನ್ನು ಆಕ್ರಮಿಸಲು ಕಡಿಮೆ ಬಲ ಸಾಕು. ಅಲ್ಲದೆ, ತನಗಿಂತ ಬಹುಶಃ ಹೆಚ್ಚು ಬಲಶಾಲಿ ಹಾಗೂ ದೊಡ್ಡ ವ್ಯಕ್ತಿಯ ವಿರುದ್ಧ ಮಹಿಳೆ ಪ್ರತಿರೋಧ ತೋರಬೇಕು ಎಂದು ನಿರೀಕ್ಷಿಸುವುದು ಬಹುಶಃ ಬೆಳೆದು ಬಂದ ಪರಿಸರಕ್ಕೆ ವಿರುದ್ಧವಾದುದನ್ನು ನಿರೀಕ್ಷಿಸಿದಂತೆ. ದುರದೃಷ್ಟವಶಾತ್ ಇಂತಹ ಪರಿಸ್ಥಿತಿಗೆ ಹೆಚ್ಚಿನ ಮೆಚ್ಚುಗೆ ಇಲ್ಲ, ಹೀಗಾಗಿ ಕಡಿಮೆ ಪ್ರತಿರೋಧ ಇರುವ ಅತ್ಯಾಚಾರವನ್ನು ಕಡಿಮೆ ಗಂಭೀರವಾದುದು ಎಂದು ಪರಿಗಣಿಸಲಾಗಿದೆ.

**ii. ಹಿಂದಿನ ಲೈಂಗಿಕ ನಡತೆ** : ದೂರು ನೀಡಿದಾಕೆಯ ಸಾಕ್ಷ್ಯ ಪರಿಶೀಲನೆಗೆ ಆಕೆಯ ಹಿಂದಿನ ಲೈಂಗಿಕ ಇತಿಹಾಸವನ್ನು ಪರಿಶೀಲಿಸಲಾಗುವುದು. ಎವಿಡೆನ್ಸ್ ಕಾಯಿದೆಯ 155(4)ರಲ್ಲಿ ಇದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ: ಅತ್ಯಾಚಾರ ಪ್ರಕರಣಗಳ ವಿಚಾರಣೆ ಸಂದರ್ಭದಲ್ಲಿ ಹಿಂದಿನ ಲೈಂಗಿಕ ಇತಿಹಾಸವನ್ನು ಗಮನಕ್ಕೆ ತಂದುಕೊಳ್ಳಲಾಗುತ್ತದೆ. ಹಿಂದಿನ ಲೈಂಗಿಕ ಇತಿಹಾಸವುಳ್ಳ ಮಹಿಳೆಯರು ಸುಳ್ಳು ಹೇಳುತ್ತಾರೆ ಎಂದು ಭಾವಿಸಲಾಗುತ್ತದೆ. ಅಲ್ಲದೆ ಅವರು ಒಪ್ಪಿಗೆ ನೀಡಿರುತ್ತಾರೆ ಎಂದೂ ಭಾವಿಸಲಾಗುತ್ತದೆ. ಹಿಂದೆ ಆಕೆಗೆ ಲೈಂಗಿಕತೆ ಬೇಕಿತ್ತೆಂದರೆ, ಈಗಲೂ ಆಕೆ ಬಯಸಿದ್ದರಲ್ಲಿ ಸಂಶಯವಿಲ್ಲ ಎಂಬಂತೆ 'ಹೀಗಾಗಿ, ಅನೈತಿಕ' ಅಥವಾ 'ಸಡಿಲ ಲೈಂಗಿಕತೆ'ಯ ಇತಿಹಾಸ ಇರುವವರೆಂದರೆ, ಆಕೆ ಸುಳ್ಳು ಹೇಳುತ್ತಿದ್ದಾಳೆ ಎಂದೇ ಅರ್ಥ. ಆಕೆಯ ವಿಶ್ವಾಸಾರ್ಹತೆ ಮೇಲಿನ ದಾಳಿಗೆ ಈ ಕಾನೂನನ್ನು ಬಳಸಿಕೊಳ್ಳಲಾಗುತ್ತದೆ. ಕಡೆಗೆ ಆಕೆ "ಒಪ್ಪಿರಬೇಕು" ಎಂಬ ಅಂತಿಮ ತೀರ್ಮಾನಕ್ಕೆ ಬರಲಾಗುತ್ತದೆ.

**ಈ ಕಲ್ಪನೆಗಳಿಗೆ ಆಧಾರವಾದುದು:**

(i) ಅತ್ಯಾಚಾರಕ್ಕೆ ಸಂಬಂಧಿಸಿದಂತೆ ಮಹಿಳೆಯರು ಸುಳ್ಳು ಹೇಳುತ್ತಾರೆ.

(ii) ಮಹಿಳೆಯರು ಅತ್ಯಾಚಾರಕ್ಕೊಳಗಾಗಲು ತಕ್ಕವರು,

(iii) ಅತ್ಯಾಚಾರಕ್ಕೆ ಮಹಿಳೆ ಪ್ರಚೋದಿಸುತ್ತಾಳೆ ಎಂಬ ಅಂಶಗಳನ್ನು ಆಧರಿಸಿದುದು - ಈ ಕಲ್ಪನೆಗಳು, ಪುರುಷನ ಲೈಂಗಿಕ ವರ್ತನೆಗೆ ಮಹಿಳೆಯೇ ಕಾರಣ ಎಂಬ ದೃಷ್ಟಿಯನ್ನು ಬಲಗೊಳಿಸುತ್ತದೆ. ಆಕೆ ತನ್ನ ಲೈಂಗಿಕ ವರ್ತನೆಗಳಿಗೆ ಮಾತ್ರವಲ್ಲ, ಪುರುಷನ ಅಸಭ್ಯ ವರ್ತನೆಗಳಿಗೂ ಆಕೆಯೇ ಕಾರಣ ಎಂಬುದನ್ನು ಈ ಮೂಲಕ ಹೇಳಲಾಗುತ್ತದೆ. ಪಾವಿತ್ರ್ಯ ಹಾಗೂ ಒಪ್ಪಿಗೆಯ ಅಗತ್ಯವನ್ನು ಜತೆಗೂಡಿಸಿರುವುದು ಮಹಿಳೆಯ ಲೈಂಗಿಕ ಸ್ವಾಯತ್ತತೆ ಹಾಗೂ ಘನತೆಯನ್ನು ನಿರಾಕರಿಸಿದಂತಾಗಿದೆ.

**(iii) ರುಜುವಾತು ಪಡಿಸುವಿಕೆ (Corroboration) :** ಶಾಸನಬದ್ಧ ಅವಕಾಶಗಳಲ್ಲಿ ಇಲ್ಲದ ಇನ್ನೊಂದು ಅಗತ್ಯ ರುಜುವಾತು ಪಡಿಸುವಿಕೆ, ಆದರೆ ಇದು ಸಾಮಾನ್ಯ ಕಾನೂನಿನ

ನಿಯಮಗಳ ಅನ್ವಯ 'ಅಗತ್ಯ'ವಾಗಿ ಅಭಿವೃದ್ಧಿಗೊಂಡಿದೆ. ಆದರೆ ಇತ್ತೀಚೆಗೆ ಸಾಮಾನ್ಯವಾಗಿ ಮಹಿಳೆ ತನ್ನ ಪಾವಿತ್ರ್ಯದ ಮೇಲಿನ ಆಕ್ರಮಣದ ಬಗ್ಗೆ ಸುಳ್ಳು ಹೇಳುವುದಿಲ್ಲ ಎಂಬ ನೆಲೆಯ ಮೇಲೆ ನ್ಯಾಯಾಧೀಶರು ಈ ನಿಯಮವನ್ನು ಸಡಿಲಗೊಳಿಸಿದ್ದಾರೆ.

ಅತ್ಯಾಚಾರ ಮತ್ತಿತರ ಲೈಂಗಿಕ ಅಪರಾಧಗಳ ಸಂಬಂಧದಲ್ಲಿ, ಇತರ ಅಪರಾಧಗಳಿಗಿಂತ ರುಜುವಾತು ಪಡಿಸುವಿಕೆ ಕಷ್ಟ. ಬೀದಿ ಕಳ್ಳತನದಲ್ಲಿ, ರುಜುವಾತು ಪಡಿಸುವಿಕೆಯ ಅಗತ್ಯವನ್ನು ಸುಲಭವಾಗಿ ಪಡೆದುಕೊಳ್ಳಬೇಕು. ಕದ್ದ ವಸ್ತುವಿನೊಂದಿಗೆ ವ್ಯಕ್ತಿಯನ್ನು ಬಂಧಿಸಬಹುದು. ಆದರೆ ಅತ್ಯಾಚಾರ ಸಂಬಂಧದಲ್ಲಿ ಈ ಅಗತ್ಯ ಸ್ಥಾಪಿಸುವುದು ಕಷ್ಟ. ಅತ್ಯಾಚಾರದಿಂದ ಬಹುತೇಕ ಪ್ರಕರಣಗಳಲ್ಲಿ ಸಾಕ್ಷಿಗಳೇ ಇರುವುದಿಲ್ಲ. ಪರಿಚಿತರೊಬ್ಬರಿಂದ ಅಥವಾ ಮಹಿಳೆಗೆ ಗೊತ್ತಿರುವ ವ್ಯಕ್ತಿಯಿಂದ ನಡೆಯುವ ಅತ್ಯಾಚಾರ ಪ್ರಕರಣಗಳಲ್ಲಿ ಇದು ಅತ್ಯಂತ ಕಷ್ಟ. ಅತ್ಯಾಚಾರ ಪ್ರಕರಣಗಳಲ್ಲಿ ಈ ಬಗೆಯ ಸಂದರ್ಭಗಳೇ ಸಾಮಾನ್ಯವಾಗಿರುತ್ತದೆ. ವೈದ್ಯಕೀಯ ಸಾಕ್ಷ್ಯಗಳು 'ಕೂಡುವಿಕೆ' (Penetration) ಆಗಿದೆ ಎಂದು ಹೇಳಬಹುದು. ಆದರೆ ಸಂಭೋಗ ನಡೆದಿದೆ ಎಂಬುದನ್ನು ಮಾತ್ರ ಇದು ಸಾಬೀತು ಪಡಿಸುತ್ತದೆ. ಈ ಕ್ರಿಯೆಗೆ ಒಪ್ಪಿಗೆ ಇರಲಿಲ್ಲ ಅಥವಾ ಇದರಲ್ಲಿ ಒಳಗೊಂಡಾತ ಆರೋಪಿ ಎಂಬುದನ್ನು ಹೇಳುವುದಿಲ್ಲ. ಅತ್ಯಾಚಾರ ಪ್ರಕರಣಗಳಲ್ಲಿ ರುಜುವಾತು ಪಡಿಸುವಿಕೆಯೇ ಕಷ್ಟ. ಇದು ಮಹಿಳೆಯ ಸಾಕ್ಷ್ಯವನ್ನು ಅನರ್ಹಗೊಳಿಸುವುದಲ್ಲದೆ, ಮಹಿಳೆಯರೂ ನಂಬಲರ್ಹರಾದ ಸಾಕ್ಷಿಗಳಿಲ್ಲ - ಅವರು ಅತ್ಯಾಚಾರದ ಬಗ್ಗೆ ಸುಳ್ಳು ಹೇಳುತ್ತಾರೆ ಎಂಬ ಕಲ್ಪನೆಯನ್ನು ಪುಷ್ಟೀಕರಿಸುತ್ತದೆ.

**ಕೂಡುವಿಕೆ :** ಈಗಿರುವ ಕಾನೂನಿನ ಪ್ರಕಾರ, ಶಿಶ್ನದಿಂದ ಯೋನಿಯ ಸಂಯೋಗಕ್ಕೆ ಸಾಕ್ಷ್ಯವಿರಬೇಕು. ಈ ಅಂಶ ಸಾಬೀತು ಪಡಿಸಲು ಮಹಿಳೆ ವಿಫಲವಾದಲ್ಲಿ, ಅಥವಾ ಆಕ್ರಮಣಕಾರ ಯೋನಿ ಬಳಿ ಬರೀ ವೀರ್ಯವನ್ನು ಸ್ರವಿಸಿದ್ದರೆ, ಅತ್ಯಾಚಾರದ ಅಪರಾಧ ಸಾಬೀತಾಗುವುದಿಲ್ಲ. ಈ ಕ್ರಿಯೆ ಮತ್ತೊಂದು ಅಸಭ್ಯ ಹಲ್ಲೆ ಎನ್ನಲಾಗುತ್ತದೆ. ಅಥವಾ ಕಡಿಮೆ ಶಿಕ್ಷೆ ವಿಧಿಸಲಾಗುವ (ಭಾರತೀಯ ದಂಡ ಸಂಹಿತೆಯ 354, 509 ಮತ್ತು 511ನೇ ವಿಧಿಗಳು) ಅತ್ಯಾಚಾರ ಯತ್ನ ಎಂದು ಪರಿಗಣಿಸಲಾಗುತ್ತದೆ.

ಈ ಅಗತ್ಯದ ಸಮಸ್ಯೆ ಎಂದರೆ, ಮಹಿಳೆಯ ಬಾಯಿಗೆ ಶಿಶ್ನ ತುರುಕುವುದು ಅಥವಾ ಯೋನಿಗೆ ಬೆರಳು, ಬ್ಯಾಟ್ ಅಥವಾ ಕಡ್ಡಿ ತುರುಕುವುದಕ್ಕಿಂತ ಕೂಡುವಿಕೆ (Penetration) ಹೆಚ್ಚು ಅಪಮಾನಕರ ಹಾಗೂ ಹೀನಾರೂಪದ ಅನುಭವ ಎಂದು ಪರಿಗಣಿಸುವುದು. ಪಾವಿತ್ರ್ಯದ ಬಗೆಗಿರುವ ಸಾಂಪ್ರದಾಯಿಕ ಕಲ್ಪನೆ ಹಾಗೂ ನ್ಯಾಯಯುತ ತಂದೆಗಿಂತ ಬೇರೆ ವ್ಯಕ್ತಿಯಿಂದ ಗರ್ಭ ಧರಿಸುವ ಭೀತಿ - ಕೂಡುವಿಕೆ ಅಗತ್ಯಕ್ಕೆ ಸಂಬಂಧಿಸಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇತರ ಕೂಡುವಿಕೆಯ (Penetration) ಸ್ವರೂಪಗಳು ಅಥವಾ ಲೈಂಗಿಕ ಹಲ್ಲೆಗಿಂತ ಶಿಶ್ನದಿಂದ ಕೂಡುವಿಕೆಗೆ ನೀಡಲಾಗಿರುವ ಆದ್ಯತೆ, ಮಹಿಳೆಯ ದೇಹದ ಸಮಗ್ರತೆಗಿಂತ ನ್ಯಾಯಬದ್ಧ ತಂದೆಯ ಹಕ್ಕುಗಳನ್ನು ರಕ್ಷಿಸಿಕೊಳ್ಳುವ ಅಗತ್ಯವನ್ನು ಚಾರಿತ್ರಿಕವಾಗಿ ಆಧರಿಸಿದೆ. ಇದು ಮಹಿಳೆ ಅನುಭವಿಸುವ ಇದಕ್ಕಿಂತ ಕಡಿಮೆ ಅವಮಾನಕರವೆನ್ನಲಾಗದ ಲೈಂಗಿಕ ದುರಾಚಾರ ಅಥವಾ ಹಿಂಸೆಗಳ ಇತರ ಎಲ್ಲಾ ರೀತಿಗಳನ್ನು ಬದಿಗಿರಿಸುತ್ತದೆ.

ತಾತ್ಕಾಲಿಕ ಉಪಸಮಿತಿಯ ಪ್ರಸ್ತಾವನೆ - ಲೈಂಗಿಕ ಹಲ್ಲೆ ಕರಡು ಮಸೂದೆ 1993

**ಲೈಂಗಿಕ ಹಲ್ಲೆ :** ರಾಷ್ಟ್ರೀಯ ಮಹಿಳಾ ಆಯೋಗ ಸ್ಥಾಪಿಸಿದ ತಾತ್ಕಾಲಿಕ ಉಪಸಮಿತಿ ತನ್ನ 1993ರ ಲೈಂಗಿಕ ಹಲ್ಲೆ ಕರಡು ಮಸೂದೆಯಲ್ಲಿ ಅತ್ಯಾಚಾರ (ಐಪಿಸಿಯ 375, 376ನೇ ವಿಧಿಗಳು), ಮಹಿಳೆಯ ಶೀಲದ ಮೇಲಿನ ಆಕ್ರಮಣ (ಐಪಿಸಿಯ 509ನೇ ವಿಧಿ), ಮಹಿಳೆಯ ಶೀಲಹರಣದ ಉದ್ದೇಶದಿಂದ ಮಹಿಳೆಯ ವಿರುದ್ಧ ಆಕ್ರಮಣ (ಐಪಿಸಿ 354ನೇ ವಿಧಿ) ಹಾಗೂ ಮಕ್ಕಳ ವಿರುದ್ಧದ ಲೈಂಗಿಕ ದುರಾಚಾರಕ್ಕೆ ಸಂಬಂಧಿಸಿದ ಅವಕಾಶಗಳನ್ನು 'ಲೈಂಗಿಕ ಹಲ್ಲೆ' ಅಧ್ಯಾಯದಲ್ಲಿ ಕ್ರೋಢೀಕರಿಸಿದೆ. ವಿವಿಧ ಪ್ರತ್ಯೇಕ ದಂಡನಾ ಅವಕಾಶಗಳ ಸ್ಥಾನದಲ್ಲಿ 'ಲೈಂಗಿಕ ಹಲ್ಲೆ' ಹಾಗೂ 'ತೀವ್ರತರ ಲೈಂಗಿಕ ಹಲ್ಲೆ' ಅಪರಾಧಗಳನ್ನು ಪರಿಶೀಲಿಸುವಂತಹ ಕ್ರೋಢೀಕೃತ ಅವಕಾಶಗಳಿರಬೇಕು ಎಂದು ಶಿಫಾರಸು ಮಾಡಲಾಗಿದೆ.

ಈ ಪ್ರಕಾರ, ಈ ಕರಡು ಮಸೂದೆ ಭಾರತೀಯ ದಂಡ ಸಂಹಿತೆಯ 375, 376, 377, 354 ಹಾಗೂ 509ನೇ ವಿಧಿಗಳನ್ನು ತೆಗೆದು ಹಾಕಬೇಕೆಂದು ಶಿಫಾರಸು ಮಾಡಿದೆ.

**ತಾತ್ಕಾಲಿಕ ಉಪ ಸಮಿತಿ ಪ್ರಸ್ತಾವನೆ ಕುರಿತ ವ್ಯಾಖ್ಯೆ :**

**ಕೂಡುವಿಕೆ (penetration)** : ತಾತ್ಕಾಲಿಕ ಉಪಸಮಿತಿಯ ಪ್ರಸ್ತಾವನೆ ಅತ್ಯಾಚಾರ ಅಪರಾಧದ ಲೈಂಗಿಕ ಆಯಾಮಕ್ಕಿಂತ ಹಿಂಸಾಚಾರ ಆಯಾಮಕ್ಕೆ ಒತ್ತು ನೀಡುವತ್ತ ಗಮನ ನೀಡಿದೆ. ಮಹಿಳೆಯ ಒಪ್ಪಿಗೆ ಇಲ್ಲದೆ ಶಿಶ್ನದಿಂದ ಯೋನಿಯ ಕೂಡುವಿಕೆಗಿಂತ ಹೆಚ್ಚಿನ ಅಂಶವನ್ನು ಒಳಗೊಳ್ಳುವ ರೀತಿಯಲ್ಲಿ ಅತ್ಯಾಚಾರದ ವಿವರಣೆಯನ್ನು ವಿಸ್ತಾರಗೊಳಿಸುವ ಮೂಲಕ ಇದನ್ನು ಮಾಡಲಾಗಿದೆ. ಈ ವಿಸ್ತೃತ ವಿವರಣೆ, ಶಿಶ್ನದಿಂದ

ಯೋನಿಯ ಕೂಡುವಿಕೆಗೆ ಮಾತ್ರ ಸೀಮಿತವಾಗದಂತಹ ಅಪರಾಧದ ಮಹಿಳೆಯರ ಅನುಭವಗಳನ್ನು ಒಳಗೊಳ್ಳುತ್ತದೆ. ಕೂಡುವಿಕೆ ರೀತಿಯಲ್ಲಿಯೇ ಘಾಸಿಗೊಳಿಸುವ ಅಥವಾ ಅವಮಾನಿಸುವ ಅಸಭ್ಯ ಆಕ್ರಮಣಗಳ ಅನುಭವಗಳನ್ನು ಒಳಗೊಳ್ಳಲೂ ಉದ್ದೇಶಿಸಲಾಗಿದೆ. ಈ ಪ್ರಸ್ತಾವನೆ, ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದಂತೆ ಭಾರತೀಯ ದಂಡ ಸಂಹಿತೆಯಲ್ಲಿರುವ ಎಲ್ಲಾ ಅವಕಾಶಗಳನ್ನು "ಲೈಂಗಿಕ ಹಲ್ಲೆ" ಎಂಬ ಶೀರ್ಷಿಕೆಯಡಿ ಒಂದೇ ಅಪರಾಧ'ದ ಅಡಿ ಕ್ರೋಢೀಕರಿಸಿದೆ, ಇದು 'ತೀವ್ರತರ ಲೈಂಗಿಕ ಹಲ್ಲೆ' ಎಂಬ ಮತ್ತೊಂದು ಉಪವಿಭಾಗವನ್ನು ಹೊಂದಿದೆ. ಹೀಗಾಗಿ, ಒಪ್ಪಿಗೆ ಇಲ್ಲದ ಯಾವುದೇ ಲೈಂಗಿಕ ಚಟುವಟಿಕೆ ಮಹಿಳೆಯ ಲೈಂಗಿಕ ಹಾಗೂ ದೇಹದ ಸಮಗ್ರತೆಯ ಉಲ್ಲಂಘನೆಯಾಗಿದ್ದು ಇದನ್ನು ಶಿಕ್ಷಿಸಬೇಕು ಎಂಬುದಕ್ಕೆ ಪ್ರಸ್ತಾವನೆ ಒತ್ತು ನೀಡಿದೆ.

ಆದರೆ ಲೈಂಗಿಕ ಹಲ್ಲೆಯ ಉದ್ದೇಶಿತ ವಿವರಣೆ, ಲೈಂಗಿಕ ಹಲ್ಲೆ ಎನ್ನುವುದಕ್ಕಿಂತ ಲೈಂಗಿಕ ಕಿರುಕುಳ ಎನ್ನಬಹುದಾದಂತಹ ಅಪರಾಧಗಳನ್ನು ಒಂದೇ ವಿಭಾಗದಲ್ಲಿ ಒಳಗೊಳ್ಳುವ ಮೂಲಕ ಅತ್ಯಾಚಾರ ಅಪರಾಧದ ತೀವ್ರತೆಯನ್ನು ದುರ್ಬಲಗೊಳಿಸುವ ಅವಕಾಶವೂ ಇದೆ.

**ಒಪ್ಪಿಗೆ :** 375 (3) ವಿಧಿ ಅನ್ವಯ ಪ್ರತ್ಯೇಕ ವಿವರಣೆ ನೀಡುವ ಮೂಲಕ 'ಒಪ್ಪಿಗೆ'ಯ ವಿವರಣೆಯನ್ನು ಸ್ಪಷ್ಟಪಡಿಸಲು ಪ್ರಸ್ತಾವನೆ ಯತ್ನಿಸಿದೆ.

'ಅತ್ಯಾಚಾರ'ವೆಂಬುದು ಚಾರಿತ್ರಿಕವಾಗಿ ಶಿಶ್ನದಿಂದ ಯೋನಿಯ ಕೂಡುವಿಕೆಗೆ ಸಂಬಂಧಿಸಿದೆ. ಆದರೆ ಹೊಸ ಕಾನೂನು ಮಹಿಳೆಯ ಲೈಂಗಿಕ ಸ್ವಾಯತ್ತತೆಯನ್ನು ಗುರುತಿಸಿ, ಆಕೆಯನ್ನು 'ಯಾವುದೇ ರೀತಿಯ' ಇಷ್ಟವಿಲ್ಲದ ಲೈಂಗಿಕ ಚಟುವಟಿಕೆಯಿಂದ ರಕ್ಷಿಸಬೇಕು ಎಂದು ತಾತ್ಕಾಲಿಕ ಉಪಸಮಿತಿಯ ಶಿಫಾರಸು ಹೇಳಿದೆ.

ಆದರೆ ಲೈಂಗಿಕ ಹಲ್ಲೆಯ ಲೈಂಗಿಕ ಆಯಾಮಕ್ಕಿಂತ ಹಿಂಸೆಯ ಆಯಾಮಕ್ಕೆ ಒತ್ತು ನೀಡುತ್ತಾ, ತಾತ್ಕಾಲಿಕ ಉಪ ಸಮಿತಿಯ ಪ್ರಸ್ತಾವನೆ ಪರಿಚಿತರ ಅತ್ಯಾಚಾರದ ವಲಯಗಳನ್ನು ಒಳಗೊಳ್ಳುವುದಿಲ್ಲ. ಇಂತಹ ಸಂಬಂಧಗಳಲ್ಲಿ ಬಳಸಲಾಗುವ ಬಲಾತ್ಕಾರದ ವಿಚಾರ ಪರಿಶೀಲನೆಗೆ ಒಳಪಡುವುದೇ ಇಲ್ಲ.

ತಾತ್ಕಾಲಿಕ ಉಪ ಸಮಿತಿ ಕರಡು ಪ್ರತಿ ಮೇಲೆ ಶಿಫಾರಸುಗಳು

• ಹಲವಾರು ಕಾಮನ್‌ವೆಲ್ತ್ ಹಾಗೂ ಏಷ್ಯಾ ಪೆಸಿಫಿಕ್ ರಾಷ್ಟ್ರಗಳಲ್ಲಿ ಪ್ರಸ್ತಾಪವಾಗಿರುವ ಅಥವಾ ಜಾರಿಗೊಳಿಸಲಾಗಿರುವ ರೀತಿಯಲ್ಲಿ ಸುಧಾರಣೆಗಳನ್ನು ತರಬಹುದು. ಅತ್ಯಾಚಾರವನ್ನು ತೆಗೆದುಹಾಕಿ ಅದರ ಬದಲಿಗೆ, ಶಿಶ್ನದಿಂದ ಯೋನಿಯ ಕೂಡುವಿಕೆಯಲ್ಲದೆ ಅನೇಕ ಬಗೆಯ ಒಪ್ಪಿಗೆ ಇಲ್ಲದ ಲೈಂಗಿಕ ಚಟುವಟಿಕೆಗಳನ್ನು ಒಳಗೊಳ್ಳುವಂತಹ ಲೈಂಗಿಕ ಹಲ್ಲೆಯ ಅಪರಾಧವನ್ನು ಒಳಗೊಳ್ಳುವ ವಿಚಾರ ಈಗಾಗಲೇ ಆಸ್ಟ್ರೇಲಿಯಾದ ನ್ಯೂ ಸೌತ್ ವೇಲ್ಸ್ ಮತ್ತು ಕೆನಡಾಗಳಲ್ಲಿ ಜಾರಿಗೊಳಿಸಲಾಗಿದೆ. ನ್ಯೂಜಿಲೆಂಡ್ ಅತ್ಯಾಚಾರದ ಅಪರಾಧವನ್ನು ಉಳಿಸಿಕೊಂಡಿದೆ. ಫಿಲಿಪ್ಪೀನ್ಸ್‌ನಲ್ಲೂ ಇತ್ತೀಚೆಗೆ ಉದ್ದೇಶಿಸಲಾಗಿರುವ ಮಸೂದೆ ಇದನ್ನು ಉಳಿಸಿಕೊಂಡಿದೆ. ಆದರೆ ಒಪ್ಪಿಗೆ ಇಲ್ಲದ ವಿಸ್ತೃತ ಚಟುವಟಿಕೆಗಳನ್ನೆ ಒಳಗೊಳ್ಳುವಂತೆ ಇದನ್ನು ವಿಸ್ತರಿಸಲಾಗಿದೆ.

ಕೆನಡಾದಲ್ಲಿ 'ಅತ್ಯಾಚಾರ'ದ ಬದಲಿಗೆ 'ಲೈಂಗಿಕ ಹಲ್ಲೆ'ಯ ಅಪರಾಧವನ್ನು ಜಾರಿಗೊಳಿಸಲಾಗಿದೆ.

ಕೆನಡಾ ಕಾನೂನಿನ ಗುರಿಯೂ ತಾತ್ಕಾಲಿಕ ಉಪಸಮಿತಿಯ ಪ್ರಸ್ತಾವನೆಗಳಿಗೆ ಸಮನಾಗಿದ್ದು, ಅಪರಾಧದ ಲೈಂಗಿಕ ಆಯಾಮಕ್ಕಿಂತ ಹಿಂಸಾಚಾರದ ಆಯಾಮಕ್ಕೆ ಹೆಚ್ಚಿನ ಒತ್ತು ನೀಡುತ್ತದೆ. ಲೈಂಗಿಕತೆ ಮತ್ತು ಹಿಂಸಾಚಾರದ ಮಧ್ಯದ ಗೆರೆ ಮಹಿಳೆಯರಿಗೆ ಜಾರುವ ಇಳಿಜಾರಿನದಾಗಿದ್ದು, ಹಿಂಸಾಚಾರದ ಮಹಿಳೆಯರ ಅನುಭವ ಸಾಮಾನ್ಯವಾಗಿ ಲೈಂಗಿಕತೆಯದೇ ಆಗಿರುತ್ತದೆ. ಹೀಗಾಗಿ, ಈ ಎರಡನ್ನೂ ಪ್ರತ್ಯೇಕಗೊಳಿಸುವ ಯತ್ನ, ಮಹಿಳೆಯರು ಹಿಂಸಾಚಾರ ಅನುಭವಿಸುವ ರೀತಿಗಳನ್ನು ಅಗೋಚರಗೊಳಿಸಿದಂತಾಗುತ್ತದೆ. ಹೀಗಾಗಿ, ಮಹಿಳೆಯರು ಹಿಂಸಾಚಾರಗಳನ್ನು ಅನುಭವಿಸುವ ರೀತಿಗಳನ್ನು ಗುರುತಿಸುವುದಕ್ಕಾಗಿ ಭಾರತದಲ್ಲಿ ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದ ಅಧ್ಯಾಯಗಳನ್ನು, ಸಾಮಾನ್ಯ ಹಲ್ಲೆಗಳ ಅಧ್ಯಾಯಗಳಿಂದ ಬೇರ್ಪಡಿಸಬೇಕು ಎಂದು ಶಿಫಾರಸು ಮಾಡಲಾಗಿದೆ.

ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದಂತೆ ಇರುವ ಅವಕಾಶಗಳಲ್ಲಿ ನೀತಿಯ ಅಂಶವನ್ನು ತೆಗೆದುಹಾಕುವುದು ಮುಖ್ಯವಾದುದು. ಇಲ್ಲಿ ಬಳಕೆಯಾಗಿರುವ ವಿಕ್ಟೋರಿಯನ್ ಯುಗದ ನೈತಿಕತೆ ಆಧರಿಸಿದ ಭಾಷೆ ಬದಲಿಸುವ ಮೂಲಕ ಇದನ್ನು ಮಾಡಬಹುದು. ಅಸಭ್ಯತೆ (indecency), ಲೈಂಗಿಕತೆ ಅರಿವು (Carnal Knowledge) ಅಥವಾ ಶೀಲದ ಆಕ್ರಮಣ (Outgoing the modesty) ಇತ್ಯಾದಿ ಪದಗಳು ಮಹಿಳೆಯ ಲೈಂಗಿಕತೆ ಹಾಗೂ ಪಾವಿತ್ರ್ಯ ಆಸ್ತಿಯಾಗಿದ್ದು ರಕ್ಷಣೆಯ ಅಗತ್ಯವಿದೆ ಎಂಬ ಕಲ್ಪನೆಗಳನ್ನು ಆಧರಿಸಿದೆ. ಮಹಿಳೆಯ ಲೈಂಗಿಕ ಸ್ವಾಯತ್ತತೆ ಹಾಗೂ ಆಕೆಯ ದೇಹದ ಸಮಗ್ರತೆಯ

ಹಕ್ಕುಗಳ ಗುರುತಿಸುವಿಕೆ ಹಾಗೂ ರಕ್ಷಣೆಯನ್ನು ಬಿಂಬಿಸುವ ರೀತಿಯಲ್ಲಿ ಈ ಅವಕಾಶಗಳಿಗೆ ತಿದ್ದುಪಡಿ ಮಾಡಬೇಕು.

**'ಇಲ್ಲ' ಎಂದರೆ 'ಇಲ್ಲ' ನಿಲುವು :** ಒಪ್ಪಿಗೆ 'ಇಲ್ಲ' ಎಂದರೆ ಏನೆಂಬ ಬಗ್ಗೆ ಮಹಿಳೆಯ ಅನುಭವಗಳನ್ನು ಬರೆಯುವ ಮೂಲಕ ಒಪ್ಪಿಗೆಯ ಬಗೆಗಿನ ಅರಿವು ವಿಸ್ತರಿಸಲು ತಾತ್ಕಾಲಿಕ ಉಪ ಸಮಿತಿ ಪ್ರಸ್ತಾವನೆ ಯತ್ನಿಸಿದೆ. ವಾಸ್ತವ ಒಪ್ಪಿಗೆಯನ್ನು ಸಾಬೀತು ಮಾಡುವ ಬದಲು ಆಕೆ ಒಪ್ಪಿರಬೇಕು ಎಂಬುದನ್ನಷ್ಟೆ ತೋರಿಸುವುದು ಪ್ರತಿವಾದಿಗೆ ಸಾಕಾಗಿರುವ ಈಗಿನ ಸ್ಥಿತಿಗೆ ಸವಾಲಾಗುವ ಯತ್ನ ಇಲ್ಲಿನದು.

ತಾನು ಒಪ್ಪಿರಲಿಲ್ಲ ಎಂಬುದನ್ನು ಸ್ಥಾಪಿಸಲು ಸಾಕಷ್ಟು ಪ್ರತಿರೋಧ ತೋರಿಸಲಾಗಿತ್ತು ಎಂಬುದನ್ನು ದೂರು ನೀಡಿದಾಕೆ ಸಾಬೀತು ಪಡಿಸಬೇಕಿರುವ ಸಮಸ್ಯೆಯನ್ನು ಈಗ ಸಿದ್ಧಪಡಿಸಲಾಗಿರುವ ಪ್ರಸ್ತಾವನೆಯೇನೂ ನಿವಾರಿಸುವುದಿಲ್ಲ. ಹೀಗಾಗಿ, ಮಹಿಳೆ 'ಇಲ್ಲ' ಎಂದಲ್ಲಿ 'ಇಲ್ಲ' ಎಂಬುದರ ಬಗ್ಗೆ ಕಾನೂನಿನ ನಿಲುವನ್ನು ಬಲಪಡಿಸಲು ಪ್ರಸ್ತಾವನೆಗೆ ತಿದ್ದುಪಡಿ ತರಬೇಕಿದೆ ಎಂದು ಶಿಫಾರಸು ಮಾಡಲಾಗಿದೆ. ಈ ಸಂಬಂಧದಲ್ಲಿ, ನ್ಯೂ ಸೌತ್ ವೇಲ್ಸ್ ಹಾಗೂ ಕೆನಡಾಗಳಲ್ಲಿ ಜಾರಿಯಲ್ಲಿರುವ ಹೊಸ ಕಾನೂನಿನ ಮಾದರಿಯಲ್ಲಿ ತಾತ್ಕಾಲಿಕ ಉಪ ಸಮಿತಿಯ ಪ್ರಸ್ತಾವನೆ ಬಲಗೊಳ್ಳಲಿ ಎಂದು ಶಿಫಾರಸು ಮಾಡಲಾಗಿದೆ.

**ತೀವ್ರತರ ಲೈಂಗಿಕ ಹಲ್ಲೆ :** ಲೈಂಗಿಕ ಹಲ್ಲೆಯ ಕೆಲವು ವರ್ಗಗಳು ಅವುಗಳ ಕ್ರಿಯೆಯ ಗಂಭೀರ ಸ್ವರೂಪದಿಂದಲೇ ತೀವ್ರತರ ಲೈಂಗಿಕ ಹಲ್ಲೆ ಎಂದು ವರ್ಗೀಕರಿಸಲು ತಾತ್ಕಾಲಿಕ ಉಪ ಸಮಿತಿಯ ಪ್ರಸ್ತಾವನೆ ಶಿಫಾರಸು ಮಾಡಿದೆ. ಪೋಲೀಸ್ ಕಸ್ಟಡಿಯಲ್ಲಿ ಲೈಂಗಿಕ ಹಲ್ಲೆಯ ಅಪರಾಧ, ಸಾರ್ವಜನಿಕ ಸೇವಕರಿಂದ, ಆಸ್ಪತ್ರೆ, ಜೈಲು, ರಿಮ್ಯಾಂಡ್ ಹೋಂ ಇತ್ಯಾದಿಗಳ ಸಿಬ್ಬಂದಿಯಿಂದ, ಸಾಮೂಹಿಕ ಅತ್ಯಾಚಾರ, 12 ವರ್ಷಕ್ಕಿಂತ ಕೆಳಗಿರುವ ಅಪ್ರಾಪ್ತ ವಯಸ್ಸಿನ ಬಾಲೆಯ ಮೇಲೆ ಅತ್ಯಾಚಾರ, ಗರ್ಭಿಣಿಯ ಮೇಲಿನ ಅತ್ಯಾಚಾರ - ಇದರಲ್ಲಿ ಸೇರುತ್ತದೆ. ಇದರಲ್ಲಿ ಸಶಸ್ತ್ರ ಪಡೆಯ ಸಿಬ್ಬಂದಿ, ಅಧಿಕಾರದಲ್ಲಿರುವ ಅಥವಾ ಟ್ರಸ್ಟ್ ಅಥವಾ ಆರ್ಥಿಕ ಅಥವಾ ಸಾಮಾಜಿಕ ಸಂಸ್ಥೆಗಳಲ್ಲಿನ ವ್ಯಕ್ತಿಗಳಿಂದಾಗುವ ಲೈಂಗಿಕ ಹಲ್ಲೆ, ದೇಹಕ್ಕೆ ತೀವ್ರತರ ತೊಂದರೆ ಉಂಟುಮಾಡುವ ಹಾಗೂ ಸುದೀರ್ಘಾವಧಿಯ ಲೈಂಗಿಕ ಹಲ್ಲೆಯೂ ಇದರಲ್ಲಿ ಸೇರಿದೆ. ವಿವಿಧ ರೀತಿಯ ತೀವ್ರತರ ಲೈಂಗಿಕ ಹಲ್ಲೆಗೆ ವಿವಿಧ ಶಿಕ್ಷೆಗಳನ್ನು ನೀಡಲು ಉದ್ದೇಶಿಸಲಾಗಿದೆ.

**ಶಿಕ್ಷೆ :** ಈಗಿರುವ ಕಾನೂನಿನಲ್ಲಿ ಅತ್ಯಾಚಾರಕ್ಕೆ 7 ವರ್ಷಗಳ ಕನಿಷ್ಠ ಜೈಲು ಶಿಕ್ಷೆ ಹಾಗೂ ಸಾಮೂಹಿಕ ಅತ್ಯಾಚಾರ, ಅಪ್ರಾಪ್ತ ವಯಸ್ಕರ ಅತ್ಯಾಚಾರ, ಪೋಲೀಸ್ ಠಾಣೆಯಲ್ಲಿನ ಅತ್ಯಾಚಾರ ಇತ್ಯಾದಿಗಳಿಗೆ 10 ವರ್ಷಗಳ ಜೈಲು ಶಿಕ್ಷೆ ವಿಧಿಸಲಾಗಿದೆ. ಈ ಕನಿಷ್ಠ ಶಿಕ್ಷೆಯನ್ನು ಕಡಿಮೆ ಮಾಡುವುದನ್ನು ನ್ಯಾಯಾಧೀಶರ ವಿವೇಚನೆಗೆ ಬಿಡಲಾಗಿದೆ. ಆದರೆ ಇದಕ್ಕೆ ಅಗತ್ಯವಾದ ಕಾರಣಗಳನ್ನು ತೀರ್ಪಿನಲ್ಲಿ ದಾಖಲಿಸಬೇಕಿದೆ. ಇದರ ಪರಿಣಾಮವಾಗಿ, ಹಲವಾರು ವರ್ಷಗಳಿಂದ ಶಿಕ್ಷೆಗೊಳಗಾದ ವ್ಯಕ್ತಿಗಳ ತೀರ್ಪುಗಳನ್ನು ನ್ಯಾಯಾಧೀಶರು ಕಡಿಮೆ ಮಾಡುತ್ತಲೇ ಬಂದಿದ್ದಾರೆ. ಶಿಕ್ಷೆ ವಿಧಿಸುವ ಹಂತದಲ್ಲಿ, ದೂರು ನೀಡಿದಾಕೆಯೂ 'ನಡತೆ' ಹಾಗೂ 'ಲೈಂಗಿಕ ಇತಿಹಾಸ'ದ ಗರಿಷ್ಠ ಲಾಭವನ್ನೂ ಪ್ರತಿವಾದಿ ವಕೀಲರು ಪಡೆದುಕೊಳ್ಳುತ್ತಾರೆ. ಹೀಗಾಗಿ, ಅಪರಾಧದ ತೀವ್ರ ಸ್ವರೂಪವನ್ನು ಗಮನಿಸಿದಲ್ಲಿ, ಕಡ್ಡಾಯ ಕನಿಷ್ಠ ಶಿಕ್ಷೆ ಒದಗಿಸುವ ಸ್ವರೂಪವೊಂದರ ಅಗತ್ಯ ತೀವ್ರವಾಗಿದೆ. ಕಾನೂನಿನಿಂದ ಎಣಿಸಲು ಸಾಧ್ಯವಾಗದಂತಹ ಸಂದರ್ಭಗಳ ಪರಿಶೀಲನೆಯಲ್ಲಿ ನ್ಯಾಯಾಂಗ ವಿವೇಚನೆಗೂ ಇಲ್ಲಿ ಅವಕಾಶವಿರಬೇಕು.

ತಾತ್ಕಾಲಿಕ ಉಪಸಮಿತಿಯ ಉದ್ದೇಶಿತ ಕರಡು, ಪ್ರತಿಯೊಂದು ವಿಧದ ಲೈಂಗಿಕ ಹಲ್ಲೆಗೂ ಕಡ್ಡಾಯ ಕನಿಷ್ಠ ಶಿಕ್ಷೆ ವಿಧಿಸಲಿದೆ. ಅಲ್ಲದೆ, ಕೆಲವು ಪ್ರಕರಣಗಳಲ್ಲಿ ಕೆಲವು ಸ್ಪಷ್ಟ ನಿರೂಪಿತ ಮಿತಿಗಳ ಒಳಗೇ ನ್ಯಾಯಾಂಗ ವಿವೇಚನೆಗೂ ಅವಕಾಶ ಕಲ್ಪಿಸಲಾಗಿದೆ.

ತಾತ್ಕಾಲಿಕ ಉಪಸಮಿತಿ ವರದಿಯ ಉದ್ದೇಶಿತ ಶಿಕ್ಷಾ ಸ್ವರೂಪವನ್ನು ತೀರಾ ಸಂಕೀರ್ಣವಾಗಿದ್ದು, ನ್ಯಾಯಾಧೀಶರು ಹಾಗೂ ವಕೀಲರೂ ಸುಲಭವಾಗಿ ಅರ್ಥಮಾಡಿಕೊಳ್ಳುವುದು ಕಷ್ಟವಾಗಿದೆ ಎಂದು ಮನವಿಯಲ್ಲಿ ಹೇಳಲಾಗಿದೆ. ನ್ಯಾಯಾಲಯದಲ್ಲಿ ಪ್ರಕರಣಗಳು ಬಂದಾಗ, ಈ ಶಿಕ್ಷೆಗಳನ್ನು ವಿಧಿಸುವಲ್ಲಿ ಅಪಾರ ಗೊಂದಲ ಉಂಟಾಗಿ ಪ್ರತಿವಾದಿ ವಕೀಲರಿಗೆ ಅನುಕೂಲಕರವಾಗಿ ಪರಿಣಮಿಸಿಬಿಡಬಹುದು. ಇದರಿಂದ ಶಿಕ್ಷೆಗಳ ವರ್ಗೀಕರಣ ಕಡಿಮೆ ಇರಬೇಕೆಂದು ಮನವಿ ಶಿಫಾರಸು ಮಾಡಿದೆ. ಅಲ್ಲದೆ ತೀವ್ರ ಸ್ವರೂಪದ ಲೈಂಗಿಕ ಹಲ್ಲೆಯ ಪ್ರಕರಣಗಳಲ್ಲಿ ಮಾತ್ರ ನ್ಯಾಯಾಂಗ ವಿವೇಚನೆಗೆ ಅವಕಾಶ ಕಲ್ಪಿಸಲಾಗಿದ್ದು, ಲೈಂಗಿಕ ಹಲ್ಲೆಯ ಎಲ್ಲ ಪ್ರಕರಣಗಳಲ್ಲೂ ಸೂಚಿತ ಮಿತಿಯೊಳಗೆ ನ್ಯಾಯಾಂಗ ವಿವೇಚನೆಗೆ ಅವಕಾಶ ಇರಬೇಕು ಅಥವಾ ಇದಕ್ಕೆ ಪೂರ್ಣ ಅವಕಾಶವೇ ಇರಬಾರದು ಎಂದು ಮನವಿ ಅಭಿಪ್ರಾಯಪಟ್ಟಿದೆ. ತಾತ್ಕಾಲಿಕ ಉಪಸಮಿತಿ, ಅಪರಾಧ ದಂಡ ಸಂಹಿತೆಯ 160ನೇ ವಿಧಿಗೆ ಮತ್ತೊಂದು ಸೇರ್ಪಡೆಯನ್ನು ಪ್ರಸ್ತಾಪ ಮಾಡಿದೆ. ಲೈಂಗಿಕ ಹಲ್ಲೆಗೊಳಗಾದ

ವ್ಯಕ್ತಿಯ ಹೇಳಿಕೆಯನ್ನು ಮಹಿಳಾ ಪೋಲೀಸ್ ಅಧಿಕಾರಿ, ಅಥವಾ ಮಹಿಳಾ ಪೋಲೀಸ್ ಅಧಿಕಾರಿ ಇಲ್ಲದಿದ್ದಲ್ಲಿ ಮಹಿಳಾ ಸಾಮಾಜಿಕ ಕಾರ್ಯಕರ್ತೆಯೊಬ್ಬರಿಂದ ದಾಖಲು ಮಾಡಬೇಕು ಎಂದು ಇದು ಸೂಚಿಸಿದೆ. ಆದರೆ ಇಂತಹ ಅವಕಾಶ, ಹೇಳಿಕೆಗಳ ದಾಖಲಾತಿಯಲ್ಲಿರುವ ಅಂತರ್ಗತ ವಿಳಂಬದ ಸಮಸ್ಯೆಯನ್ನು ಮತ್ತಷ್ಟು ತೀವ್ರಗೊಳಿಸುತ್ತದೆ. ಅಲ್ಲದೆ ವೈದ್ಯಕೀಯ ಪರೀಕ್ಷೆ ಸೇರಿದಂತೆ ನಂತರದ ತನಿಖೆಯನ್ನು ವಿಳಂಬಗೊಳಿಸುತ್ತದೆ. ವಿಶೇಷ ಸಂದರ್ಭಗಳಲ್ಲಿ ಸ್ಥಳದಲ್ಲೇ ಹೇಳಿಕೆ ದಾಖಲೆಗೆ ಪೋಲೀಸ್ ಅಧಿಕಾರಿಗೆ ಆಯ್ಕೆಯ ಅವಕಾಶವಿರಬೇಕು ಎಂದು ಮನವಿ ಪತ್ರ ಅಭಿಪ್ರಾಯಪಟ್ಟಿದೆ.

18 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಪುರುಷ ಅಥವಾ ಮಹಿಳೆಯ ಹೇಳಿಕೆಯನ್ನು ಎಫ್‌ಐಆರ್ ಅಥವಾ ತನಿಖೆಯ ಪ್ರಗತಿಯ ಸಂದರ್ಭದಲ್ಲಿ ದಾಖಲು ಮಾಡುವಾಗ, ಅಂತಹ ವ್ಯಕ್ತಿಯ ಸಂಬಂಧಿ ಅಥವಾ ಸ್ನೇಹಿತರು ಹಾಗೂ ಮಹಿಳಾ ಸಂಘಟನೆಯ ಪ್ರತಿನಿಧಿಯೊಬ್ಬರು ಹಾಜರಿರಲು ಅವಕಾಶವಿರಬೇಕು ಎಂದೂ ಉಪಸಮಿತಿ ಶಿಫಾರಸು ಮಾಡಿದೆ. ಇಂತಹ ಶಿಫಾರಸು ಉಪಯುಕ್ತ ಹಾಗೂ ಅಗತ್ಯವಾದುದು. ಆದರೆ ಇಂತಹ ಹಾಜರಿ ಕಡ್ಡಾಯವಾದುದಾಗಬಾರದು. ಇಂತಹ ಹೇಳಿಕೆಯ ದಾಖಲಾತಿಯಲ್ಲಿ ಯಾವುದೇ ವಿಳಂಬ ಆಗದಂತೆ ಸಂಬಂಧಿಸಿದ ವ್ಯಕ್ತಿಗೆ ಆಯ್ಕೆಗೆ ಅವಕಾಶವಿರಬೇಕು ಎಂದು ಮನವಿ ಪತ್ರ ತಿಳಿಸಿದೆ.

ಸಾಕ್ಷ್ಯ ಕಾಯಿದೆಯ 114ಎ ವಿಧಿಯ ಪ್ರಕಾರ, ಈಗಿರುವಂತೆ ಪೋಲೀಸ್ ಕಸ್ಟಡಿಯೊಳಗಿನ ಅತ್ಯಾಚಾರ, ಸಾಮೂಹಿಕ ಅತ್ಯಾಚಾರ, ಆಸ್ಪತ್ರೆಯೊಳಗಿನ, ಜೈಲು ಅಥವಾ ರಿಮ್ಯಾಂಡ್ ಹೋಂಗಳಲ್ಲಿನ ಅತ್ಯಾಚಾರ ಪ್ರಕರಣಗಳಲ್ಲಿ ಲೈಂಗಿಕ ಸಂಪರ್ಕ ನಡೆದಿರುವುದು ಸಾಬೀತಾಗಿದ್ದಲ್ಲಿ, ದೂರು ನೀಡಿದಾಕೆ ತಾನು ಒಪ್ಪಿರಲಿಲ್ಲ ಎಂದು ಹೇಳಿದಲ್ಲಿ, ಲೈಂಗಿಕ ಸಂಪರ್ಕಕ್ಕೆ ಆಕೆ ಒಪ್ಪಿರಲಿಲ್ಲ ಎಂದೇ ಭಾವಿಸಬೇಕು. ತಾತ್ಕಾಲಿಕ ಉಪಸಮಿತಿಯ ಪ್ರಸ್ತಾವನೆಯ ಪ್ರಕಾರ, ಈ ನಿಯಮಾವಳಿಯನ್ನು ಲೈಂಗಿಕ ಹಲ್ಲೆಯ ಎಲ್ಲಾ ಪ್ರಕರಣಗಳಿಗೂ ವಿಸ್ತರಿಸಬೇಕು. ಆದರೆ ಸಾಕ್ಷ್ಯ ಕಾಯಿದೆಯ 114ಎನ ಈಗಿರುವ ವಿಧಿ ಈಗಿರುವಂತೆಯೇ ಇರುವುದು ಒಳ್ಳೆಯದೆಂದು ಮನವಿ ಶಿಫಾರಸು ಮಾಡಿದೆ.

ಐಪಿಸಿಯ 354ಹಾಗೂ 509ನೇ ವಿಧಿಗಳನ್ನು ರದ್ದು ಪಡಿಸಬೇಕು ಎಂದು ತಾತ್ಕಾಲಿಕ ಉಪಸಮಿತಿ ಶಿಫಾರಸು ಮಾಡಿದೆ. ಹಾಗೂ ಈ ಅಪರಾಧವನ್ನು 'ಲೈಂಗಿಕ ಹಲ್ಲೆ'ಯ ಸಮಗ್ರ ಅಪರಾಧದೊಳಗೆ ಸೇರಿಸಬೇಕೆಂದೂ ಶಿಫಾರಸು ಮಾಡಲಾಗಿದೆ. ಅಲ್ಲದೆ ನೀತಿಯನ್ನು ಹೇಳುವಂತಹ ಹುಡುಗಿ ಅಥವಾ ಹೆಣ್ಣಿನ "ಶೀಲಹರಣ"ದಂತಹ ಪದಗಳನ್ನು ಈ ಪ್ರಸ್ತಾವನೆ ಪ್ರಶ್ನಿಸಿದೆ.

'ಶೀಲಹರಣ'ದಂತಹ ಅತಿಯಾದ ನೀತಿಯ ಅರ್ಥಗಳನ್ನು ಹಚ್ಚುವಂತಹ ಅವಕಾಶಗಳನ್ನು ಐಪಿಸಿಯ 354 ಹಾಗೂ 509ನೇ ವಿಧಿಗಳಲ್ಲಿ ತೆಗೆದುಹಾಕಿ ಬದಲಾಗಿ ಲೈಂಗಿಕ ಕಿರುಕುಳ ಅಪರಾಧ ಎಂದು ವಿವರಿಸುವುದು ಒಳ್ಳೆಯದು ಎಂದೂ ಶಿಫಾರಸು ಮಾಡಲಾಗಿದೆ.

**ಮಕ್ಕಳು ಮತ್ತು ಹದಿವಯಸ್ಸಿನವರಿಗೆ ಸಂಬಂಧಿಸಿದ ಅವಕಾಶಗಳು :** ಭಾರತದಲ್ಲಿ ಈಗಿರುವ ಕಾನೂನಿನ ಪ್ರಕಾರ, ಮಕ್ಕಳ ಮೇಲಿನ ಲೈಂಗಿಕ ದುರಾಚಾರಕ್ಕೆ ಸಂಬಂಧಿಸಿದಂತೆ ಕಾನೂನಿನಲ್ಲಿ ಯಾವುದೇ ಪ್ರತ್ಯೇಕ ಅವಕಾಶವಿಲ್ಲ. ಅತ್ಯಾಚಾರ ಕಾನೂನಿನ ಅಡಿಯಲ್ಲೇ ಇದನ್ನೂ ಪರಿಶೀಲಿಸಲಾಗುತ್ತದೆ.

ಮಕ್ಕಳಿಗೆ ಸಂಬಂಧಿಸಿದ ಲೈಂಗಿಕ ದುರಾಚಾರದ ಕಾನೂನುಗಳನ್ನು ಪ್ರತ್ಯೇಕ ಅಧ್ಯಾಯದಲ್ಲಿ ಪರಿಶೀಲಿಸುವುದು ಒಳ್ಳೆಯದು ಎಂದು ಶಿಫಾರಸು ಮಾಡಲಾಗಿದೆ. ಮಕ್ಕಳ ಲೈಂಗಿಕ ಶೋಷಣೆ ವ್ಯಾಪಕವಾದ ಸಮಸ್ಯೆ ಎಂಬುದಕ್ಕೆ ಮಾನ್ಯತೆ ನೀಡಲೂ ಇದು ಅಗತ್ಯವಾಗಿದೆ. ಅಪ್ರಾಪ್ತ ವಯಸ್ಕರ ಲೈಂಗಿಕ ಶೋಷಣೆ ತನ್ನದೇ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಪ್ರತ್ಯೇಕವಾಗಿ ಪರಿಶೀಲಿಸುವುದು ಅಗತ್ಯ, ಇದಲ್ಲದೆ, ಅಪ್ರಾಪ್ತರ ಲೈಂಗಿಕ ಶೋಷಣೆ ಕುರಿತಂತೆ ಈಗಿರುವ ಕಾನೂನು, 'ಅತ್ಯಾಚಾರ' ಹಾಗೂ 'ಶೀಲಹರಣ'ದಂತಹ ಭಾಷೆಯಲ್ಲಿ ಹುದುಗಿ ಹೋಗಿದೆ. ಇದು ಅಪ್ರಾಪ್ತರ ಮೇಲಿನ ಲೈಂಗಿಕ ಅಪರಾಧಗಳ ಹೆಚ್ಚಿನ ಕ್ಷೇತ್ರವನ್ನು ಒಳಗೊಳ್ಳುವುದಿಲ್ಲ. ಕಾನೂನಿನಲ್ಲಿರುವ ಕೊರತೆಗಳಿಗೆ ಜ್ವಲಂತ ಉದಾಹರಣೆ ಝೂರು ಪ್ರಕರಣ, ಈ ಅಪ್ರಾಪ್ತಳು ತೀವ್ರತರ ಲೈಂಗಿಕ ಶೋಷಣೆಗೆ ಗುರಿಯಾಗಿದ್ದರೂ, ಅತ್ಯಾಚಾರದ ಆರೋಪಗಳನ್ನು ಕೈಬಿಟ್ಟು, ಅಪ್ರಾಪ್ತಳ 'ಶೀಲದ ಮೇಲಿನ ಆಕ್ರಮಣ'ದಂತಹ ಕಡಿಮೆ ಗಂಭೀರ ಸ್ವರೂಪದ ಆರೋಪಗಳನ್ನು ಮಾತ್ರ ಹೊರಿಸುವುದು ನ್ಯಾಯಾಧೀಶರಿಗೆ ಸಾಧ್ಯವಾಯಿತು. ಶೀಲದ ಮೇಲಿನ ಆಕ್ರಮಣದಂತಹ ಪದವು ನೀತಿ ನಿಯಮಗಳ ಧ್ವನಿಗಳನ್ನು ಹೊಂದಿದ್ದು ಅಪ್ರಾಪ್ತರ ಸಂಬಂಧದಲ್ಲಿ ಅಪ್ರಸ್ತುತವಾಗುತ್ತದೆ.

ಮಕ್ಕಳು ಅನುಭವಿಸುವ ಶೋಷಣೆಯ ರೀತಿಗಳನ್ನು ಪ್ರತಿಬಿಂಬಿಸುವ ರೀತಿ ಕಾನೂನನ್ನು ಸುಧಾರಿಸಲು ಶಿಫಾರಸು ಮಾಡಲಾಗಿದೆ. ಈ ದಿಸೆಯಲ್ಲಿ ಈಗಿರುವ ಕಾನೂನುಗಳು ಏನೇನೂ ಸಾಲದು ಎಂದೂ ಮನವಿ ಪತ್ರದಲ್ಲಿ ಅಭಿಪ್ರಾಯ ಪಡಲಾಗಿದೆ.

●

# ಬೀಡಿ ಕಟ್ಟುವ ಮಹಿಳೆಯರ ಸಂಘಟಿತ ಹೋರಾಟ

- ಜಯಶ್ರೀ

ಬೋರ್ಗರೆಯುವ ಸಮುದ್ರದ ಶಬ್ದದ ನಡುವೆಯೂ ತಂಪಾಗಿ ಬೀಸುವ ಗಾಳಿ ಎಷ್ಟು ಮುದ ನೀಡುತ್ತದೋ ಅಷ್ಟೇ ಮುದವಾಗಿರುತ್ತದೆ ಕಡಲ ತಡಿಯ ಜನರ ಮನ. ಇನ್ನೊಂದು ಕಡೆಗೆ ಕಣ್ಣು ಹಾಯಿಸಿದರೆ ಹಸಿರು ಸೀರೆಯುಟ್ಟ ಭೂತಾಯಿ, ತಲೆ ಎತ್ತಿ ನಿಂತು ಕೈ ಬೀಸಿ ತನ್ನೆಡೆಗೆ ಬಾ ಎಂದು ಕರೆಯುವ ತೆಂಗು-ಅಡಿಕೆಯ ಸಾಲು, ಒಣಗಿದ ಗಂಟಲಿಗೆ ಅಮೃತವನ್ನೀಯುವ ಕಲ್ಪವೃಕ್ಷ, ಬರಿದಾದ ಕೈಗೊಂದಿಷ್ಟು ಧನಲಕ್ಷ್ಮಿಯನ್ನು ಆಹ್ವಾನಿಸಿ ಮನಸ್ಸಿನ ಬೇಗೆಯನ್ನು ನಿವಾರಿಸುವ ತೆಂಗಿನಕಾಯಿ-ಅಡಿಕೆ.

ಇಷ್ಟೊಂದು, ಹಸಿರು, ತಂಪು, ಸಿರಿ. ಇವೆಲ್ಲದರ ಮಧ್ಯದಲ್ಲೇ ಇರುವ ಕೆಲವು ಕುಟುಂಬಗಳ ಜೀವನಕ್ಕೆ ಹಸಿರೇ ಇಲ್ಲದಿರಬಹುದು. ದಿನವೂ ಉರಿಯಾಗಿರಬಹುದು. ಕಡಲಿನ ಅಬ್ಬರ ಎಷ್ಟು ಭೀಕರತೆಯನ್ನು ನೆನಪಿಸುವುದೋ ಅಷ್ಟೇ ಭೀಕರವಾಗಿರುತ್ತದೆ ಅಲೆಗಳ ಬಡಿತ ಕೂಡಾ. ಜೀವನ ಅಂದರೆ ಬೇವು-ಬೆಲ್ಲ. ಆದರೆ ಕೆಲವು ಕುಟುಂಬಗಳಿಗೆ ಬೇವೇ, ಇನ್ನು ಕೆಲವಕ್ಕೆ ಬೆಲ್ಲವೆ. ಬೆಲ್ಲದ ನೆನಪು ಕನಸಲ್ಲಿ ಬಂದರೂ ಕೂಡಾ ಪಾಪ ಮಾಡಿರುವಷ್ಟು ದುಸ್ತರ ಬದುಕು.

ಸುಮಾರು 45-50 ವರ್ಷಗಳ ಹಿಂದೆ ಪ್ರಾಮುಖ್ಯವಾಗಿ ಹಳ್ಳಿಯ ಜನರ ಬದುಕನ್ನು ನೆನಪಿಸಿಕೊಂಡರೆ ಈವಾಗಲೂ ಮೈ ನವಿರೇಳುತ್ತದೆ. ಹೊಲ-ಗದ್ದೆಗಳ ಕೆಲಸ ಮುಗಿಯಿತೆಂದರೆ ಅವರ ಮನೆಯ ಒಲೆ ಉರಿಯುವುದಿಲ್ಲ. ಮತ್ತೆ ಉರಿ ಕಾಣಬೇಕಾದರೆ ಪುನಃ ಕೂಲಿ ಪ್ರಾರಂಭವಾಗಬೇಕು. ಇಲ್ಲವೇ ಊರಿನ ಸಾಹುಕಾರರುಗಳಿಂದ ದುಡ್ಡು; ಅಕ್ಕಿ ಸಾಲ ಪಡೆಯಬೇಕು. ಅಕ್ಕಿ ತೆಗೆದುಕೊಂಡರೆ ಅದರ ಎರಡರಷ್ಟು ಹಿಂತಿರುಗಿಸಬೇಕು. ದುಡ್ಡು ತೆಗೆದುಕೊಂಡರೆ ಬಡ್ಡಿಗೆ ಬಡ್ಡಿ ಸೇರಿ ಸೊನ್ನೆಗಳ ಸಂಖ್ಯೆ ಜಾಸ್ತಿಯಾಗುವ ಸಂಭವವೇ ಜಾಸ್ತಿ. ಇಲ್ಲವೇ ಅವರುಗಳ ಮನೆಗಳಲ್ಲಿ ಜೀತ ಮಾಡಬೇಕು.

ಈ ರೀತಿಯ ಕೆಟ್ಟ ಬದುಕಿಗೆ ಹಣತೆ ಹಚ್ಚಿದ್ದೇ ಬೀಡಿ ಉದ್ಯಮ. ಇದು ಬಹಳಷ್ಟು ಬಡವರಿಗೆ ಉದ್ಯೋಗ, ಮೂರು ಹೊತ್ತಿನ ಊಟ ಕೊಡುವುದರ ಜೊತೆಗೆ ಜೀತ ಪದ್ಧತಿಯನ್ನೇ ಅಳಿಸಿದ ಮಹಾನ್ ಉದ್ಯಮ. 40-45 ವರ್ಷ ದಾಟಿದ ಮಹಿಳೆಯರು ಕೂಡಾ ಬೀಡಿ ಕಟ್ಟುವುದು ಅಸಾಧ್ಯವಾದಲೂ ತಮ್ಮ ಮಕ್ಕಳಿಗೋ, ಮೊಮ್ಮಕ್ಕಳಿಗೋ ಆ ಕೆಲಸದಲ್ಲಿ ಸಹಾಯ ಮಾಡುವುದನ್ನು ಕಲಿತುಕೊಂಡರು. ಶ್ರೀಮಂತರ ಮನೆಗಳಿಂದ ಅಕ್ಕಿ-ದುಡ್ಡು ತಂದು; ಎಷ್ಟು ದುಡಿದರೂ ಅವರ ಹೊಟ್ಟೆಯನ್ನೇ ತುಂಬಿಸುವಂತಹ ಕೆಟ್ಟ ದಿನಗಳಿಂದ ಮುಕ್ತಿ ಪಡೆದರು.

ಮೊದ ಮೊದಲು ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮಾತ್ರ ಕಾಣಿಸಿಕೊಂಡಿದ್ದ ಬೀಡಿ ಉದ್ದಿಮೆ ಅನಂತರದಲ್ಲಿ ಆಂಧ್ರ, ತಮಿಳುನಾಡು ಮುಂತಾದ ಹಲವು ರಾಜ್ಯಗಳಲ್ಲೂ ಕಾಣಿಸಿಕೊಂಡಿತು. ದಕ್ಷಿಣ ಕನ್ನಡ ಜಿಲ್ಲೆಯ ಬೀಡಿಗೆ ಹೋಲಿಸಿದರೆ ದೇಶದ ಬೇರೆಲ್ಲಿಯ ಬೀಡಿಗೂ ಅಷ್ಟೊಂದು ಹೆಸರಿರುವುದು ಕಂಡುಬರುತ್ತಿಲ್ಲ. ಅಂತೆಯೇ ಬೀಡಿಯ ತಯಾರಿಕೆಯಲ್ಲೂ ವ್ಯತ್ಯಾಸವಿದೆ ಮತ್ತು ಅದರ ಸ್ವಾದದಲ್ಲೂ ತುಂಬಾ ವ್ಯತ್ಯಾಸವಿದೆಯೆಂಬುದು ಬಲ್ಲವರ ಮಾತು.

ಈ ಉದ್ಯಮ ಒಂದು ರೀತಿಯಲ್ಲಿ ಬಡವರಿಗೆ ಆಶಾಕಿರಣವಾದರೆ ಇನ್ನೊಂದು ರೀತಿಯಲ್ಲಿ ಅಪಾಯಕಾರಿಯಾಯಿತು ಕೂಡಾ. ಇದರ ಜೊತೆ ಜೊತೆಗೆ ಬಹಳಷ್ಟು ಜನ ಬಾಲಕಾರ್ಮಿಕರಾದರು, ಚಿಕ್ಕ ವಯಸ್ಸಿನಲ್ಲೇ ಬಿಡುವಿಲ್ಲದಾಯಿತು, ಆರೋಗ್ಯದ ಮೇಲೆ ಕೆಟ್ಟ ಪರಿಣಾಮವಾಯಿತು, ಮೊದಲೇ ವಿದ್ಯೆ ಕಲಿಸಲು ಆಸಕ್ತಿ ಇಲ್ಲದ ಜನ ಅದರ ಜೊತೆಗೆ ಇನ್ನಷ್ಟೂ ಅವಿದ್ಯಾವಂತರ ಸಂಖ್ಯೆ ಜಾಸ್ತಿಯಾಯಿತು. ಅರ್ಧದಲ್ಲೇ ಶಾಲೆ ಬಿಟ್ಟು ಬೀಡಿ ಕಟ್ಟುವ ಹೆಣ್ಣು ಮಕ್ಕಳು ಜಾಸ್ತಿಯಾದರು. ಇಡೀ ಸಂಸಾರದ ಭಾರ ಹೆಣ್ಣು ಮಕ್ಕಳ ಮೇಲೆ ಬಿತ್ತು. ಸಂಪಾದನೆಗೆ ಒಂದು ಸುಲಭ ಉದ್ಯಮವಾಗುವುದರ ಜೊತೆಗೆ ಹೆಣ್ಣು ಮಕ್ಕಳ ಮೇಲಿನ ಶೋಷಣೆ ಅತಿಯಾಗತೊಡಗಿತು.

ಬೀಡಿ ಕಟ್ಟುವುದರ ಜೊತೆಗೆ ಆ ಕುಟುಂಬಕ್ಕೆ ಬೇರೇನಾದರೂ ಸಂಪಾದನೆ ಇದ್ದರೆ ಮಾತ್ರ ಅವರ ಜೀವನ ಸುಧಾರಣೆ ಕಾಣಬಹುದು. ಇಲ್ಲದಿದ್ದರೆ ಬರೀ ಬೀಡಿಯ ಸಂಪಾದನೆಯಿಂದ ಉಳಿತಾಯ ಮಾಡುವುದು ತುಂಬಾ ಕಷ್ಟ. ಆದರೆ ಕೆಲವು ಮನೆಗಳಲ್ಲಿ ನಿದ್ದೆ ಕೆಟ್ಟು ಬೀಡಿ ಕಟ್ಟಿ ಅಲ್ಪ ಸ್ವಲ್ಪ ಕೂಡಿಟ್ಟು ಶಾಲೆ ಕಲಿತವರಿದ್ದಾರೆ. ತಮಗೆ ಬಟ್ಟೆ ಹೊಲಿಸಿಕೊಳ್ಳುವುದು, ಕಿವಿಗೆ ಒಂದು ಜೊತೆ ಚಿನ್ನದೋಲೆ ಮಾಡಿಸಿಕೊಳ್ಳುವುದು. ಇದಕ್ಕಾಗಿಯೇ ಅವರು ಬೀಡಿ ಕಂಟ್ರಾಕ್ಟರುಗಳಲ್ಲಿ ಚೀಟಿ ಸೇರಿಸಿಕೊಳ್ಳುತ್ತಾರೆ. ಅವನು ಅಷ್ಟಷ್ಟು

ಮೋಸ ಮಾಡುತ್ತಾನೆಂದು ಗೊತ್ತಿದ್ದರೂ ಉಳಿತಾಯಕ್ಕೆ ಬೇರಾವ ಮೂಲವೂ ಇಲ್ಲದಿರುವುದರಿಂದ ಅವರಿಗಿದು ಅನಿವಾರ್ಯ. ಊರಿನ ದೊಡ್ಡ ರತ್ತಿಂದ ಸಾಲ ತೆಗೆದುಕೊಂಡರೆ ಬಡ್ಡಿ ಕೊಡಬೇಕು. ಬೀಡಿ ಕಂಟ್ರಾಕ್ಟರನ ಸಾಲಕ್ಕೆ ಬಡ್ಡಿ ಇಲ್ಲ. ವಾರಕ್ಕೊಮ್ಮೆ ಸಿಗುವ ಬೀಡಿಯ ಮಜೂರಿಯಲ್ಲಿ ಸ್ವಲ್ಪ ಸ್ವಲ್ಪ ತೀರಿಸಿಕೊಂಡು ಬಂಧರಾಯಿತು.

ಈ ಕಂಟ್ರಾಕ್ಟರನ ಮೋಸಕ್ಕೇನೂ ಮಿತಿ ಇಲ್ಲ. ಕಚ್ಚಾ ಸಾಮಗ್ರಿಯ ಅಳತೆಯಲ್ಲಿ ಮೋಸ, ಬೀಡಿಯ ಲೆಕ್ಕ ಬರೆಯುವುದರಲ್ಲಿ ಮೋಸ, ಮಜೂರಿಯ ದುಡ್ಡಲ್ಲಿ ಹಾಗೂ ಕಾರ್ಮಿಕರಿಗೆ ಸಿಗುವ ಸೌಲಭ್ಯಗಳಲ್ಲೂ ಮೋಸ. ಒಂದು ಸಾವಿರ ಬೀಡಿಗೆ 1/2 Kg ಎಲೆ ಮತ್ತು 200 gm ಹೊಗೆಸೊಪ್ಪು ಕೊಡಬೇಕಾದರೆ ಆತ ಕೊಡುವುದು 400-450 gms ಎಲೆ ಮತ್ತು 3 ಪಾವು ಹೊಗೆಸೊಪ್ಪು- ಇನ್ನು ಕೆಲವರು ಒಂದು ಸೇರು ಹೊಗೆಸೊಪ್ಪು ತೋರಿಕೆಗೆ ಕೊಡುತ್ತಾರೆ. ಆದರೆ ಸೇರಿನ ತಳದಲ್ಲಿ ಕಾಗದ ತುರುಕಿರುವವರೇ ಜಾಸ್ತಿ. ಹೀಗೆ ಮಾಡಿದಾಗ ಅವನಿಗೆ ಲಾಭ ಬಂದ ಕಚ್ಚಾಸಾಮಗ್ರಿಯಲ್ಲಿ ಅವನು ಹೆಚ್ಚಿಗೆ ಬೀಡಿ ಕಟ್ಟಿಗೆ ಎರಡು ಪಟ್ಟು ಜಾಸ್ತಿ ದುಡ್ಡಿಗೆ ಖಾಸಗಿಯವರಿಗೆ ಮಾರಬಹುದು. ಇಲ್ಲವೇ ಕಚ್ಚಾಸಾಮಗ್ರಿಯನ್ನೇ ಅತೀ ಲಾಭಕ್ಕೆ ಮಾರಬಹುದು. ಆದರೆ ಕಾರ್ಮಿಕರು ಕಡಿಮೆ ಬಂದ ಕಚ್ಚಾಸಾಮಗ್ರಿಗೆ ಭರ್ತಿ ಮಾಡಲು ಒಂದೋ ಕ್ರಯಕ್ಕೆ ತೆಗೆದು ಕೊಳ್ಳಬೇಕಾಗುತ್ತದೆ ಇಲ್ಲವೇ ಕಂಟ್ರಾಕ್ಟರು ಮಜೂರಿಯಲ್ಲಿ ದುಡ್ಡು ಹಿಡಿಯುತ್ತಾನೆ. ಇದರಿಂದಾಗಿ ಕೆಲವು ಕಾರ್ಮಿಕರು ಅತಿಯಾಗಿ ಮಾನಸಿಕ ನೋವು ಅನುಭವಿಸುವುದರ ಜೊತೆಗೆ ಕುಟುಂಬದ ಖರ್ಚಿಗೆ ತುಂಬಾ ಕಷ್ಟ ಆಗುವುದಿದೆ.

ಕೆಲವು ಕಂಟ್ರಾಕ್ಟರುಗಳಂತು ಒಂದು ಸಾವಿರ ಬೀಡಿಗೆಂದು ಕೊಟ್ಟ ಎಲೆ-ಹೊಗೆಸೊಪ್ಪಲ್ಲಿ 1100 ಬೀಡಿ ಕೇಳುವುದು, ಕೆಲವೊಮ್ಮೆ ಲೆಕ್ಕ ಬರೆಯುವಾಗ ಪುಸ್ತಕದಲ್ಲಿ 100 ಬೀಡಿ, 50 ಬೀಡಿ, 50 ಬೀಡಿ, 25 ಬೀಡಿ ಹೀಗೆ ತರತರಹದಲ್ಲಿ ಕಡಿಮೆ ಮಾಡಿ ಬರೆಯುವುದು. (ಕಡಿಮೆ ಬರೆದ ಚೀಟಿಯನ್ನು ಅವರ ಲೆಕ್ಕಕ್ಕೆ ಹಾಕಿಕೊಂಡು ಮಜೂರಿ ಕಂಟ್ರಾಕ್ಟರು ಪಡೆಯುತ್ತಾನೆ). ಪಾಸ್ ಪುಸ್ತಕದಲ್ಲಿ ಬೀಡಿಯ ಲೆಕ್ಕ ಬರೆಯುವಾಗ ಕಡಿಮೆ ಬರೆದು, ಕಾರ್ಮಿಕರ ಬೀಡಿಯ ಎಷ್ಟೋ ಮಾಲನ್ನು ಅವನ ಮನೆ ಮಂದಿಯ ಹೆಸರಲ್ಲೆಲ್ಲಾ ಪಾಸ್ ಬುಕ್ ಮಾಡಿಸಿ ಅವರಿಗೆ ಬರೆದು, ಅವರು ಬೀಡಿ ಕಟ್ಟದಿದ್ದರೂ ಈ ಕಾರ್ಮಿಕರಿಗಿಂತ ಜಾಸ್ತಿ ಬೋನಸ್, ರಜೆ ಸಂಬಳ, ಪ್ರಾವಿಡೆಂಟ್ ಫಂಡ್‌ನ ಲಾಭ ಅವರಿಗೆ ಸಿಗುತ್ತದೆ.

ಬೀಡಿಯ ಸೌಲಭ್ಯಗಳು ಈ ರೀತಿ ಇವೆ. 8.33% ಬೋನಸ್, 5% ರಜೆ ಸಂಬಳ, 2.5% ಹಬ್ಬ ರಜೆಯ ಸೌಲಭ್ಯ, ವೈದ್ಯಕೀಯ ಸೌಲಭ್ಯ, ಹೆರಿಗೆ ಭತ್ಯೆ, ಹೆರಿಗೆ ರಜೆ 3 ತಿಂಗಳು; ಪಾಸ್ ಬುಕ್ ಹೊಂದಿರುವವರ ಮಕ್ಕಳಿಗೆ ಶಾಲೆಯಲ್ಲಿ Scholarship ಸೌಲಭ್ಯ, ನಿವೇಶನ ಸೌಲಭ್ಯ ಮತ್ತು ಪ್ರಾವಿಡೆಂಟ್ ಫಂಡ್ ಸೌಲಭ್ಯ, ಪ್ರಾವಿಡೆಂಟ್ ಫಂಡ್‌ಗೆ ಈಗ ಸಾವಿರಕ್ಕೆ 2ರೂ ಹೋಗುತ್ತದೆ. ನಿವೇಶನ ಸೌಲಭ್ಯ ಇದ್ದರೂ ಇಲ್ಲಿಯವರೆಗೆ ಯಾರಿಗೂ ದಕ್ಕಿಲ್ಲ. ಈಗಾಗಲೇ ಕಾರ್ಮಿಕರು ನಿವೇಶನಕ್ಕೆ ಅರ್ಜಿ ಹಾಕಿ ಕಾಯುತ್ತಿದ್ದಾರೆ.

ಕೆಲವು ಬೀಡಿ ಕಂಪೆನಿಗಳು ಬೋನಸ್, ರಜೆ ಸಂಬಳ ಮತ್ತು ಹಬ್ಬ ರಜೆಯ ಹಣವನ್ನು ವರ್ಷಕ್ಕೆ ಒಂದೇ ಸಲ ಬಡ್ಡಿಗೆ ಕೊಟ್ಟರೆ, ಇನ್ನು ಕೆಲವು ಕಂಪೆನಿಗಳು ಬೇರೆ ಬೇರೆಯಾಗಿಯೇ ಕೊಡುತ್ತವೆ.

ಅಪರೂಪಕ್ಕೆ ಒಂದೆರಡು ಕಂಪೆನಿಗಳು ಹೆರಿಗೆ ಭತ್ಯೆಯನ್ನು ಒಂದು ಸಾವಿರದ ಮೇಲ್ಪಟ್ಟು ಕೊಡುತ್ತವೆ. ಅವುಗಳು 1/2 ಹಣವನ್ನು ಹೆರಿಗೆಯ ಮುಂಚೆ ಹಾಗೂ ಇನ್ನರ್ಧವನ್ನು ಹೆರಿಗೆಯ ನಂತರ ಕೊಡುತ್ತವೆ. ಆದರೆ ಹೆಚ್ಚಿನ ಕಂಪೆನಿಗಳಲ್ಲಿ ಬರೀ 500 ರೂ. ಮಾತ್ರ ಕೊಡುತ್ತಿದ್ದು; ಕೆಲವೊಮ್ಮೆ ಅದನ್ನು ಹೆರಿಗೆಯ ನಂತರ ಬಹಳ ತಡವಾಗಿ ಕೊಡುವುದಿದೆ. ಕಾರ್ಮಿಕರಿಗೆ ಸಿಗಬೇಕಾದ ಈ ಎಲ್ಲಾ ಸೌಲಭ್ಯಗಳ ವಿತರಣೆಯಲ್ಲೂ ಮೋಸ ರಾಜಾರೋಷವಾಗಿ ನಡೆಯುವುದು ಕಾರ್ಮಿಕರಿಗೆ ಗೊತ್ತಿದ್ದರೂ, ಎಲ್ಲರ ಜೊತೆ ಕುಳಿತು ಗೊಣಗುವುದು ಬಿಟ್ಟರೆ ಯಾರೂ ಬಾಯಿಬಿಟ್ಟು ಕೇಳುವುದಿಲ್ಲ.

ಹೆಚ್ಚಾಗಿ ಮಳೆಗಾಲದಲ್ಲಿ ಬೀಡಿಯ ಉತ್ಪನ್ನ ಕಡಿಮೆ ಆಗುತ್ತದೆ. ಆಗ Seasonal unemployment ಇರುತ್ತದೆ. ಆ ಸಮಯದಲ್ಲಿ 2-3 ಬ್ರಾಂಚೆಂದ ಬೀಡಿ ಕಟ್ಟುವವರಿದ್ದಾರೆ. ತುಂಬಾ ಕಡಿಮೆ ಎಲೆ-ಹೊಗೆ ಸೊಪ್ಪು ಸಿಗುತ್ತದೆ. ಆ ಸಮಯದಲ್ಲಿ ಕಂಟ್ರಾಕ್ಟರುಗಳು ಬೀಡಿ ಕಟ್ಟಿಗೆ ಖಾಸಗಿಯವರಿಗೆ ಮಾರುವ ಪ್ರವೃತ್ತಿಯನ್ನು ಜಾಸ್ತಿ ಮಾಡಿಕೊಳ್ಳುತ್ತಾರೆ. ಬೀಡಿ ಕಟ್ಟಿದವರಿಗೆ ಸಾವಿರಕ್ಕೆ ರೂ. 30 ಮಜೂರಿ ಕೊಟ್ಟರೆ, ಕಂಟ್ರಾಕ್ಟರನಿಗೆ ರೂ. 60/- ಸಾವಿರಕ್ಕೆ ಸಿಗುತ್ತದೆ. (ಈ ಮಾರುವ ಬೀಡಿ ಪಾಸ್ ಬುಕ್‌ನ ಲೆಕ್ಕಕ್ಕೆ ಬರುವುದಿಲ್ಲ. ಮತ್ತು ಇದಕ್ಕೆ ಮಜೂರಿ ಬಿಟ್ಟರೆ ಯಾವ ಸೌಲಭ್ಯ ಕೂಡಾ ಸಿಗುವುದಿಲ್ಲ).

ಬೀಡಿ ಕಟ್ಟುವವರಲ್ಲಿ ಮಹಿಳೆಯರ ಮತ್ತು ಮಕ್ಕಳ ಪಾತ್ರವೇ ಜಾಸ್ತಿ. ಬೀಡಿ ಕಟ್ಟುವ ಪುರುಷರೂ ಇದ್ದಾರೆ. ಆದರೆ ಅವರ ಸಂಖ್ಯೆ ತುಂಬಾ ಕಡಿಮೆ. ಅವರಲ್ಲಿ ಕೆಲವರು ಅವರ ಸ್ವಂತ ಖರ್ಚಿಗೆ ಬೀಡಿ ಕಟ್ಟಿದರೆ ಇನ್ನು ಕೆಲವೇ ಕೆಲವರು ತಮ್ಮ ಕುಟುಂಬದ ಖರ್ಚಿಗಾಗಿ ಬೀಡಿ ಕಟ್ಟುತ್ತಾರೆ.

ಬೀಡಿ ಕಾರ್ಮಿಕರಿಗೆ ಆರೋಗ್ಯದ ತೊಂದರೆ ಬಹಳ ಇರುತ್ತದೆ. ಹೊಗೆಸೊಪ್ಪಿನ ಘಾಟು ವಾಸನೆ, ಎಲೆಯ ಧೂಳು ಕೂಡಾ ಆರೋಗ್ಯಕ್ಕೆ ತುಂಬಾ ಕೆಡುಕು. ಅವರಿಗೆ ಹೆಚ್ಚಾಗಿ ಅಂದರೆ ಎಲ್ಲರಿಗೂ ಸರ್ವೇ ಸಾಮಾನ್ಯವಾಗಿ ಬರುವ ಎಂದರೆ ತಲೆನೋವು,

ತಲೆಸುತ್ತು, ವಾಂತಿ, ಕೆಮ್ಮು, ಸೊಂಟನೋವು, ಬೆನ್ನು ನೋವು, ಕಣ್ಣಿನ ದೃಷ್ಟಿ ಕಡಿಮೆ ಆಗುವುದು. ಅಸ್ತಮಾ, ಟಿ.ಬಿ.ಯ ಪ್ರಮಾಣ ತುಂಬಾ ಕಡಿಮೆ. ಇನ್ನೊಂದು ಮುಖ್ಯವಾದ ಅಂಶವೆಂದರೆ ಗಾಳಿ, ಬೆಳಕು ಚೆನ್ನಾಗಿರುವಲ್ಲಿ ಕುಳಿತು ಬೀಡಿ ಕೆಲಸ ಮಾಡಿದರೆ ಅಸ್ತಮಾ, ಟಿ.ಬಿ.ಯಂತಹ ಖಾಯಿಲೆಗಳು ಬರುವ ಸಾಧ್ಯತೆ ತುಂಬಾ ಕಡಿಮೆ ಎಂದು ಹೇಳುತ್ತಾರೆ ಈ ಕಾರ್ಮಿಕರು. ಇಂತಹ ಖಾಯಿಲೆಗಳು ಬರುವ ಸಾಧ್ಯತೆ ತುಂಬಾ ಕಡಿಮೆ ಎಂದು ಹೇಳುತ್ತಾರೆ ಈ ಕಾರ್ಮಿಕರು. ಇಂತಹ ದೊಡ್ಡ ಕಾಯಿಲೆಗಳು ಬರುವುದಕ್ಕೆ ಕಾರಣವೇ ಸರಿಯಾಗಿ ಗಾಳಿ, ಬೆಳಕು ಇಲ್ಲದ ಜಾಗದಲ್ಲಿ ಕುಳಿತು ಬೀಡಿ ಕಟ್ಟುವುದು. ಪ್ರಾಮುಖ್ಯವಾಗಿ ಮನೆಯ ಒಳಗಡೆ ಕುಳಿತು ಬೀಡಿ ಕಟ್ಟುವುದರಿಂದ ಕಾಯಿಲೆಯನ್ನು ನಾವೇ ಬರಿಸಿಕೊಳ್ಳುತ್ತೇವೆ ಅನ್ನುತ್ತಾರೆ ಅನುಭವಸ್ಥರು. ಬೀಡಿ ಕಟ್ಟುವ ಪುರುಷರಿಗೆ ಹೆಚ್ಚಾಗಿ ಹಸಿ ಬೀಡಿಯನ್ನೇ ಸೇದುವ ಹವ್ಯಾಸ ಇರುವುದರಿಂದ ಅಂತಹವರಿಗೆ ವಿಪರೀತ ಕೆಮ್ಮು ಇರುವುದಿದೆ. ಈ ಎಲ್ಲಾ ರೋಗಗಳಿಗೆ ಸೂಕ್ತ ಸಮಯದಲ್ಲಿ ಮದ್ದು ತೆಗೆದುಕೊಳ್ಳಲು ಸಹಕಾರಿಯಾಗುವಂತೆ ಹಾಗೂ ಆರ್ಥಿಕವಾಗಿ ಹಿಂದುಳಿದವರಿಗೆ ಹೆಚ್ಚಿನ ಸಹಾಯವಾಗುವಂತೆ ಬೀಡಿ ಕಾರ್ಮಿಕರಿಗೆ ಉಚಿತ ವೈದ್ಯಕೀಯ ಸೌಲಭ್ಯವಿದೆ. ಆದರದು ಕೈಗೆಟುಕದ ಹಣ್ಣು ಇದ್ದ ಹಾಗೆ. ಈ ಆಸ್ಪತ್ರೆಗಳು ಎಲ್ಲೋ ಇರುತ್ತವೆ. ಅದಕ್ಕಾಗಿ ದುಡ್ಡು ಖರ್ಚು ಮಾಡಿಕೊಂಡು ಹೋಗಬೇಕು, ಹೋದಾಗ ಅಲ್ಲಿ ಡಾಕ್ಟ್ರು ಇಲ್ಲದಿದ್ರೆ ಹಿಂದೆ ಬರಬೇಕು. ಆದುದರಿಂದ ಜನ ಅಲ್ಲಿಗೆ ಹೋಗುವುದೇ ಇಲ್ಲ. ಹತ್ತಿರವಿರುವ ಖಾಸಗಿ ವೈದ್ಯರಲ್ಲಿ ಚಿಕಿತ್ಸೆ ಮಾಡಿಸಿಕೊಳ್ಳುವುದು ಅಭ್ಯಾಸವಾಗಿ ಬಿಟ್ಟಿದೆ.

ಬೀಡಿ ಕಟ್ಟುವ ಮಹಿಳೆಯರ ಮೇಲೆ ಬೇರೆ ಬೇರೆ ರೀತಿಯಲ್ಲಿ ಶೋಷಣೆಗಳು ನಡೆಯುವುದಿದೆ. ಬೀಡಿ ಕಂಟ್ರಾಕ್ಟರನ ಮೋಸದ ವಿರುದ್ಧ ಮಾತೆತ್ತಿದಾಗ, ಅವನ ಮಾತುಗಳಿಗೆ ಸೊಪ್ಪು ಹಾಕದೆ ವಿರೋಧಿಸಿದಾಗ ಅವನು ಹಿಂಬಾಲಕರ ಜೊತೆ ಸೇರಿ ಅಂತಹ ಹೆಣ್ಣುಮಕ್ಕಳನ್ನು ನಿಂದಿಸುವುದು, ಕೆಲವೊಮ್ಮೆ ಮುಗ್ಧ ಹೆಣ್ಣುಮಕ್ಕಳನ್ನು ತನ್ನ ಸೂತ್ರದ ಗೊಂಬೆಯಾಗಿ ಬಳಸಿ black mail ಮಾಡುವುದು, ತಡವಾಗಿ ಬೀಡಿ ತೆಗೆಯುವುದು, ಬೀಡಿಯಲ್ಲಿ ತಪ್ಪು ಹುಡುಕಿ ಬೀಡಿಯನ್ನು ಕತ್ತರಿಸಿ ಹಾಕುವುದು ಇಲ್ಲವೇ ಪೂರ್ತಿ ಕಟ್ಟುಗಳನ್ನು ಬಿಚ್ಚಿ ಹಾಕಿ ಸರಿ ಮಾಡಿ ಕೊಡುವಂತೆ ಒತ್ತಾಯಿಸುವುದು, ಅವರ ಮನೆಯವರಲ್ಲಿ ನಿಂದಿಸಿ ಚಾಡಿ ಹೇಳುವುದು. ಈ ಮುಂತಾದವು ಸರ್ವೇ ಸಾಮಾನ್ಯವಾಗಿ ನಡೆಯುತ್ತಿರುತ್ತದೆ. ಕೆಲವೊಮ್ಮೆ ಕೆಲವು ಮಹಿಳೆಯರು ಇವರಿಗೂ ಹಾಗೂ ಅವರವರ ಮನೆಯವರಿಗೂ ಹೆದರಿ ಸುಮ್ಮನಿದ್ದರೆ ಇನ್ನು ಕೆಲವರು ಪ್ರತಿಭಟಿಸಿ ನಿನ್ನ ಬೀಡಿ ಅಲ್ಲದಿದ್ದರೆ ಇನ್ನೊಬ್ಬನಲ್ಲಿ ಸಿಗುತ್ತೆ ಎಂದು ಹೇಳಿ ಎಲೆ-ಹೊಗೆಸೊಪ್ಪನ್ನು ಬಿಸಾಕಿ ಹೋಗುವುದಿದೆ.

ಬೀಡಿ ಕಾರ್ಮಿಕರ ಮೇಲೆ ನಡೆಯುವ ಶೋಷಣೆಯ ವಿರುದ್ಧ ಕೆಲಸ ಮಾಡಲು ಬೀಡಿ ಕಾರ್ಮಿಕರ ಸಂಘಟನೆ ಹುಟ್ಟಿಕೊಂಡು ಆಗಲೇ 30-35 ವರ್ಷಗಳಾದವು. ಬೀಡಿಯ ಮಜೂರಿಯಲ್ಲಿ ಹೆಚ್ಚಳ, ಇವರಿಗೆ ಸಿಗಬೇಕಾದ ಎಲ್ಲಾ ಸೌಲಭ್ಯಗಳೂ ಸಿಗಬೇಕಾದರೆ ಯೂನಿಯನ್ ಬಹಳ ತ್ರಾಸದಾಯಕವಾದ ಕೆಲಸ ಮಾಡಬೇಕಾಯಿತು. ಇವರ ಸಂಘಟನೆಯನ್ನು ಒಡೆಯುವ ಬೀಡಿ ಮಾಲೀಕರು ಬೇರೆ ಬೇರೆ ರೀತಿಯ ಕುತಂತ್ರಗಳನ್ನು ಹುಡುಕಿ ಕಾರ್ಮಿಕರು ಸಂಘಟನೆಯೊಳಗೆ ಬಾರದಿರಲು ತಮ್ಮ ಶಕ್ತಿ ಮೀರಿ ಪ್ರಯತ್ನಿಸಿದ್ದಿದೆ. ಯೂನಿಯನ್ ಮುಖಂಡರಿಗೆ ಬೇರೆ ಬೇರೆ ರೀತಿಯ ಆಮಿಷವೊಡ್ಡಿ ಅವರೇ ದೂರ ಸರಿಯುವ ಹಾಗೆ ಪ್ರಯತ್ನಿಸಿದ್ದಿದೆ. ಇದ್ಯಾವುದೂ ಫಲಕಾರಿಯಾಗದೆ ಹೋದಾಗ ಮಾಲೀಕರು ತಲೆಬಾಗಲೇಬೇಕಾಯಿತು. ಸಂಘಟನೆಗಳು ತಮ್ಮ ಬೇಡಿಕೆಗಳನ್ನು ಮುಂದಿಟ್ಟು ಧರಣಿ ಮಾಡಿದಾಗ ತಮ್ಮ ಮಕ್ಕಳು ಮರಿಗಳನ್ನೆಲ್ಲಾ ಮರೆತು 10-15 ದಿನಗಳ ತನಕ ಬೀಡಿ ಕಂಪೆನಿಗಳ ಮುಂದೆ ಕುಳಿತು ಸತ್ಯಾಗ್ರಹ ಮಾಡಿದ್ದಾರೆ. ಈ ಸಮಯದಲ್ಲಿ ಮಹಿಳೆಯರ ಆತ್ಮವಿಶ್ವಾಸವನ್ನು ಕಳಚಲು ಪೋಲೀಸರ ಬೆಂಬಲದೊಂದಿಗೆ ಮಾಲೀಕರು ಕುತಂತ್ರಗಳನ್ನು ಮಾಡಿದರೂ ಮಹಿಳೆಯರು ಮಾತ್ರ ಧೈರ್ಯಗೆಡದೆ ತಮ್ಮ ಹೋರಾಟವನ್ನು ಮುಂದುವರಿಸಿ ತಮ್ಮ ಬೇಡಿಕೆಗಳಿಗೆ ಮಾಲೀಕರು ತಲೆ ಬಾಗುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

ಈ ಮಹಾನ್ ಹೋರಾಟದ ಫಲವಾಗಿ ಇಂದು ಬೀಡಿ ಕಾರ್ಮಿಕರು ನಿವೃತ್ತಿ ವೇತನ ಪಡೆಯುವಂತಾಗಿದೆ. ಕಾರ್ಮಿಕರ ಭವಿಷ್ಯಕ್ಕೆ ಇದೊಂದು ಮಹಾನ್ ಬೆಳಕು ಎನ್ನಬಹುದು. ಈ ಮಹತ್ಸಾಧನೆಯಿಂದ ಬೀಡಿ ಕಾರ್ಮಿಕರು ತಮ್ಮ ಕೊನೆಯ ಉಸಿರಿನವರೆಗೂ ಯಾರ ಹಂಗೂ ಇಲ್ಲದೆ ಜೀವನ ನಡೆಸಿಕೊಂಡು ಹೋಗಬಹುದು.

ತಮಗೆ ಸಿಗುವ ಬರೀ ಕೂಲಿಯಲ್ಲಿ ತೃಪ್ತಿಪಟ್ಟುಕೊಂಡು ಇರಬೇಕಾಗಿದ್ದ ದಿನಗಳನ್ನು ಮರೆತು ಜೀವನದಲ್ಲಿ ಹೊಸತನವನ್ನು ಕಾಣುವ ಕಾಲ ಬಂದುದಕ್ಕೆ ತುಂಬು ಹೃದಯದಿಂದ ಹಾರೈಸೋಣವೇ.

ಆದರೆ ಒಂದು ವಿಷಯ - ಬೀಡಿ ಕಾರ್ಮಿಕರ ಸಂಘಟನೆ ಬರೀ ಪಟ್ಟಣ ಪ್ರದೇಶಕ್ಕೆ ಸೀಮಿತವಾಗಿದ್ದು ಹಳ್ಳಿಯ ಕಾರ್ಮಿಕರಿಗೆ ಇದರ ಅರಿವೇ ಇಲ್ಲದಾಗಿದೆ. ಆದುದರಿಂದ ಸಂಘಟಕರು ತಮ್ಮ ಕಾರ್ಯದೃಷ್ಟಿಯನ್ನು ಹಳ್ಳಿಕಡೆಗೂ ವಿಸ್ತರಿಸಿದರೆ ಹಳ್ಳಿಗರಿಗೂ ಅರಿವು ಮೂಡುವುದರಲ್ಲಿ ಸಂಶಯವಿಲ್ಲ.

●

# ಸ್ತ್ರೀಯರ ಸಮಸ್ಯೆಗೆ ರಾಜಕೀಯ ಸ್ವರೂಪ : ಸಹೇಲಿಯ ಅನುಭವ

ಸ್ತ್ರೀಯರ ವೈಯಕ್ತಿಕ ಸಮಸ್ಯೆಗಳಿಗೆ ನೆರವು ನೀಡುವುದನ್ನು ಸಂಪೂರ್ಣವಾಗಿ ಸಾಮಾಜಿಕ ಬದಲಾವಣೆಯ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. ಈ ಬದಲಾವಣೆ ಮಹಿಳೆಯರಿಗೆ ಪೂರಕವಾದ ವಾತಾವರಣವನ್ನು ನಿರ್ಮಿಸುವುದರಲ್ಲಿ ಸಂಶಯವಿಲ್ಲ. ಮಹಿಳೆಯರಿಗೆ ಸಂಬಂಧಪಟ್ಟ ಸಾಮಾಜಿಕ ಮೌಲ್ಯಗಳ ಬದಲಾವಣೆ ಹಾಗೂ ವೈಯಕ್ತಿಕ ಹೋರಾಟಗಳನ್ನು ಸಂಘಟಿತ ಚಳುವಳಿಗಳಿಗೆ ಸಂಬಂಧ ಕಲ್ಪಿಸುವ ಪ್ರಯತ್ನವನ್ನು ಸಹೇಲಿ ಮಾಡುತ್ತಿದೆ.

ತಮ್ಮ ಹಕ್ಕು ಬಾಧ್ಯತೆಗಳ ಸಾಧನೆಗಾಗಿ ಸಶಕ್ತರನ್ನಾಗಿಸಲು, ಅವರ ವ್ಯಕ್ತಿತ್ವದ ಬೆಳವಣಿಗಾಗಿ ಸಹೇಲಿ ಹತ್ತು ವರ್ಷಗಳ ಕಾಲ ವೈಯಕ್ತಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಮಹಿಳೆಯರಿಗೆ ನೆರವಾಗಿತ್ತು. ಸ್ವಂತ ನಿರ್ಧಾರವನ್ನು ತೆಗೆದುಕೊಳ್ಳುವ ಹಕ್ಕು ಮಹಿಳೆಯರಿಗಿದೆಯೆಂಬ ಭರವಸೆ ಮೂಡಿಸುವುದು ಹಾಗೂ ಅವಕಾಶವನ್ನು ಕಲ್ಪಿಸಿ ಕೊಡುವುದು ಅತ್ಯಗತ್ಯವಾಗಿದೆ. ಆದರೆ ಯಾವುದೇ ಒಂದು ನಿರ್ದಿಷ್ಟ ಸಮಸ್ಯೆಗೆ ನಿರ್ದಿಷ್ಟ ಪರಿಹಾರವನ್ನು ನೀಡುವುದರಲ್ಲಿ ಸಹೇಲಿಯ ಸದಸ್ಯರಿಗೆ ನಂಬಿಕೆಯಿರಲಿಲ್ಲ. ಮಹಿಳೆಯರು ಹೇಳುವುದನ್ನು ಸಹನೆಯಿಂದ ಕೇಳಿಸಿಕೊಳ್ಳುವುದು, ಆಯ್ಕೆಗಳನ್ನು ಚರ್ಚಿಸುವುದು, ಆಕೆ ತೆಗೆದುಕೊಳ್ಳುವ ನಿರ್ಧಾರಗಳನ್ನು ಬೆಂಬಲಿಸುವುದು, ಇವು ಸಹೇಲಿ ಹಮ್ಮಿಕೊಂಡ ಕಾರ್ಯ ಚಟುವಟಿಕೆಯ ಅವಿಭಾಜ್ಯ ಅಂಗಗಳಾಗಿದ್ದವು.

ಮಹಿಳೆಯರೊಂದಿಗೆ ನಡೆಸುವ ಈ ಸಂವಾದ, ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಕೌನ್ಸಿಲ್‌ತರವಿರದೇ ಮಹಿಳೆಯರೊಂದಿಗೆ ಮಹಿಳೆಯರಾಗಿ ಸಂವಾದ ನಡೆಸಲಾಗುತ್ತಿದೆ. ತಮ್ಮ ಅನುಭವಗಳನ್ನು ಆಕೆಯೊಂದಿಗೆ ಹಂಚಿಕೊಳ್ಳುವುದರೊಂದಿಗೆ, ಆಕೆಯಲ್ಲಿ ಒಬ್ಬಳೆ ಸಮಸ್ಯೆಯನ್ನು ಎದುರಿಸುವ ವಿಶ್ವಾಸ ಮೂಡುವವರಿಗೆ, ಆಕೆಯೊಂದಿಗಿರುವುದು ಅತ್ಯಗತ್ಯವಾದ ಅಂಶವಾಗಿತ್ತು.

ಸಮಾಜ ಕುಟುಂಬದ ಪಾವಿತ್ರ್ಯತೆಯನ್ನು ಬಲಗೊಳಿಸುತ್ತಲೇ ಇರುತ್ತದೆ. ಆದರೆ ನಾಲ್ಕು ಗೋಡೆಗಳ ಮುಚ್ಚಿದ ಬಾಗಿಲುಗಳ ನಡುವೆ ಸ್ತ್ರೀಯರು ಶವವಾಗುವ ನಿದರ್ಶನಗಳು ನಮ್ಮ ಮುಂದಿದೆ. ಆದರೂ ಸ್ತ್ರೀಯರಿಗೆ ಅವರ ನಿಜವಾದ ಸ್ಥಾನಮಾನ ಕುಟುಂಬದಲ್ಲಿದೆಯೆಂದು ಹೇಳಲಾಗುತ್ತದೆ.

ಮಹಿಳಾ ಚಳುವಳಿಯ ಗೃಹಹಿಂಸೆಯ ಪ್ರಶ್ನೆಗೆ ಒತ್ತು ನೀಡುವುದರ ಮೂಲಕ ಸ್ತ್ರೀಪುರುಷ ನಡುವಿರುವ ಅಸಮಾನ ಸಂಬಂಧವನ್ನು ಸಹ ಪ್ರಶ್ನಿಸಲಾಗುತ್ತಿದೆ. ಹೆಂಗಸರನ್ನು ಹೊಡೆಯುವುದು, ವೈವಾಹಿಕ ಚೌಕಟ್ಟಿನಲ್ಲಿ ಅತ್ಯಾಚಾರ ಮುಂತಾದ ಸಮಸ್ಯೆಗಳ ವಿರುದ್ಧ ಹೋರಡುವುದರ ಮೂಲಕ ಸ್ತ್ರೀಯರ ಕುಟುಂಬವೆಂದರೆ ಸ್ವರ್ಗವೆಂಬ ಭ್ರಮೆಯನ್ನು ಕಳಚಿ ಹಾಕಿದೆ. ಸ್ತ್ರೀಯರ ಮೇಲೆ ನಡೆಯುತ್ತಿರುವ ಹಿಂಸೆಯನ್ನು ಪರಿಗಣಿಸಿದರೆ, ಕುಟುಂಬಗಳು ಸ್ತ್ರೀಯರಿಗೆ ಎಷ್ಟು ಭದ್ರತೆಯನ್ನು ನೀಡುತ್ತಿದೆಯೆಂಬುದು ಸ್ಪಷ್ಟವಾಗಿದೆ. ಕಾನೂನು, ನ್ಯಾಯಾಲಯದಲ್ಲಿರುವ ಪ್ರಕರಣಗಳು, ಹಾಗೂ ಈ ಪ್ರಕ್ರಿಯೆಯಲ್ಲಿ ಸ್ತ್ರೀಯರನ್ನು ಪುನಃ ಹಿಂಸಾತ್ಮಕ ವಾತಾವರಣಕ್ಕೆ ನೂಕುತ್ತಿವೆ. ಒಂದು ನಿರ್ದಿಷ್ಟ ತಾತ್ವಿಕ ನಿಯಂತ್ರಣದಿಂದ ಸ್ತ್ರೀಯರ ದೈನಂದಿನ ಜೀವನವನ್ನು ನಿರ್ದೇಶಿಸಲಾಗುತ್ತದೆ. ಸ್ತ್ರೀಯರ ದ್ವಿತೀಯ ದರ್ಜೆಯ ಸ್ಥಾನಮಾನವನ್ನು ನಿರ್ಧರಿಸುವ ಪ್ರಧಾನ ವಿಚಾರಧಾರೆಗೆ ಮಹಿಳಾ ಚಳುವಳಿ ಒಂದು ಸವಾಲಾಗಿದೆ.

*ಸಹೇಲಿ ದೆಹಲಿಯಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ಸ್ವಾಯತ್ತ ಸಂಸ್ಥೆ. ಯಾವುದೇ ವಿದೇಶಿ ನೆರವನ್ನು ಪಡೆಯದೇ ಹತ್ತು ವರ್ಷಗಳ ಕಾಲ ನೊಂದ ಮಹಿಳೆಯರ ಸಮಸ್ಯೆಯನ್ನು ಕೈಗೆತ್ತಿಕೊಂಡು ಕೆಲಸ ಮಾಡಿತು. ಈ ಲೇಖನ ಸಹೇಲಿಯ ಸದಸ್ಯರ ಗೊಂದಲ, ದ್ವಂದ್ವಗಳನ್ನು ದಾಖಲು ಮಾಡುತ್ತಿದೆ. 1995ರಲ್ಲಿ ಹಲವಾರು ಕಾರಣಗಳಿಂದ ಈ ಕೆಲಸವನ್ನು ನಿಲ್ಲಿಸಲಾಯಿತು. ಈ ಪ್ರಕ್ರಿಯೆಯಲ್ಲಿ ಹಲವಾರು ಒಳನೋಟಗಳನ್ನು ನೋಡಬಹುದು.*

ಸ್ತ್ರೀಯರ ವೈಯಕ್ತಿಕ ಸಮಸ್ಯೆಗಳಿಗೆ ನೆರವು ನೀಡುವ ಪೋಲೀಸ್, ಕಾನೂನು, ನ್ಯಾಯಾಂಗ, ಮುಂತಾದ ಸಂಸ್ಥೆಗಳು ವರ್ಗ ಹಾಗೂ ಪಿತೃಪ್ರಧಾನತೆಯ ಪೌರಾಲ್ಯಗಳಿಂದ ತುಂಬಿರುವುದನ್ನು ಕಾಣಬಹುದು. ಸ್ತ್ರೀಯರಿಗೆ ನ್ಯಾಯ ನೀಡಬೇಕಾದ ಸಂಸ್ಥೆಗಳ ಮಿತಿಗಳು, ವಿಳಂಬ, ಹಾಗೂ ವ್ಯವಸ್ಥೆಯಲ್ಲಿನ ಅಪ್ರಮಾಣಿಕತೆ, ಮುಂತಾದವುಗಳಿಂದ ಸಹೇಲಿಯ ಸದಸ್ಯರು ಭ್ರಮನಿರಸನಗೊಂಡು ಕೆಲವೊಮ್ಮೆ ನೇರವಾಗಿ ನ್ಯಾಯ ದೊರಕಿಸಿಕೊಡುವ ದಾರಿಗಳನ್ನು ಸಹ ಹುಡುಕಲಾಗಿದೆ.

ನೊಂದ ಮಹಿಳೆಯರಿಗೆ ನೆರವು ನೀಡುವಲ್ಲಿ ಸಹೇಲಿ ಹಲವಾರು ರೀತಿಯ ಕಾರ್ಯತಂತ್ರವನ್ನು ಯೋಜಿಸಿ ಯಶಸ್ವಿಯಾಗಿದೆ. ಈ ಪ್ರಕರಣಗಳಲ್ಲಿ ನ್ಯಾಯಾಲಯಕ್ಕೆ ಹೋಗಿದ್ದರೂ ನ್ಯಾಯ, ಕನಿಷ್ಟವೆಂದರೂ 4-5 ವರ್ಷ ತೆಗೆದುಕೊಳ್ಳುವುದರ ಜೊತೆಗೆ ಆಕೆಗೆ ನ್ಯಾಯ ದೊರಕುತ್ತಿದೆಯೆಂಬ ಭರವಸೆಯು ಇರಲಿಲ್ಲ.

ಸೀಮಾ ತನ್ನ ಗಂಡ ನೀಡುತ್ತಿದ್ದ ಕಿರುಕುಳವನ್ನು ಸಹಿಸಲಾರದೇ ಅವನಿಂದ ಬೇರೆಯಾಗುವ ನಿರ್ಧಾರ ಮಾಡಿ. ತನ್ನ ವಸ್ತುಗಳನ್ನು ಗಂಡನ ಮನೆಯಿಂದ ತರಲು ಸಹೇಲಿಯ ನೆರವನ್ನು ಕೋರಿದಳು. ಸಹೇಲಿ ಗೆಳತಿಯರು ಪೋಲೀಸ್ ಸ್ಟೇಷನ್‌ಗೆ ಹೋಗಿ, ಈ ವಿಷಯವನ್ನು ಚರ್ಚಿಸಿದಾಗ ಗಂಡನ ಸಮ್ಮತಿಯಿಲ್ಲದೆ, ಇದು ಸಾಧ್ಯವಿಲ್ಲವೆಂದು ವಾದಿಸುತ್ತಿರುವಾಗಲೆ, ಹಾಗೂ ಪೋಲೀಸರು ಗಂಡನೊಂದಿಗೆ ಚರ್ಚಿಸುತ್ತಿರುವಾಗ, ಸಹೇಲಿಯ ಸದಸ್ಯರು ಮನೆಗೆ ಹೋಗಿ ಅವಳಿಗೆ ಸೇರಿದ ವಸ್ತುಗಳನ್ನು ಅವಳ ಮನೆಗೆ ತಂದರು.

ವಾಸಂತಿ ಟ್ಯಾಕ್ಸಿ ಡ್ರೈವರನ ಹೆಂಡತಿ. ಖಾಸಗೀ ಸಂಸ್ಥೆಯಲ್ಲಿ ದುಡಿಯುತ್ತಿದ್ದ ಆತ ಮರಣ ಹೊಂದಿದಾಗ, ಆಕೆಗೆ ಸಂಸ್ಥೆಯವರು ನಾಮಕಾವಸ್ಥೆಗೆ ಸ್ವಲ್ಪ ಪರಿಹಾರ ನೀಡಿದರು. ಸಹೇಲಿಯ 10-15 ಸದಸ್ಯರು ಕಛೇರಿಗೆ ಹೋಗಿ ಮಾಲೀಕನನ್ನು ಭೇಟಿಯಾಗಿ ಆಕೆಗೆ ಬರಬೇಕಾದ ಪರಿಹಾರದ ಬಗ್ಗೆ ಚರ್ಚಿಸಿದರು. ಆತ ಹಲವಾರು ಸಬೂಬುಗಳನ್ನು ನೀಡಿ ನುಣುಚಿಕೊಳ್ಳಲು ಪ್ರಯತ್ನಿಸಿದನು. ಕೊನೆಗೆ ಆತ ಪೋಲೀಸರನ್ನು ಕರೆಸಿದ, ಸಹೇಲಿಯ ವಕೀಲ ವೃತ್ತಿಯ ಸದಸ್ಯರು ಕ್ಷಿತ್ತಿದ ಪ್ರಶ್ನೆಗೆ ಉತ್ತರ ನೀಡಲಾಗದೆ, ಅವಳಿಗೆ ನೀಡಬೇಕಾದ ಪರಿಹಾರದ ಮೊತ್ತವನ್ನು ಚೆಕ್ ರೂಪದಲ್ಲಿ ನೀಡಿದ. ಕೋರ್ಟಿನಲ್ಲಿ ಹಲವಾರು ವರ್ಷಗಳ ಕಾಲ ಕಾಯಬೇಕಾಗಿದ್ದ ತೀರ್ಪು ತಕ್ಷಣವೇ ಪರಿಹಾರ ನೀಡಿತು.

[illegible] ಸುಮಾಳಿಗೆ ಆಕೆಯ ಗಂಡನ ಕಛೇರಿಯಿಂದಲೇ ನೇರವಾಗಿ ಕೆಲವು ತಿಂಗಳು ಹಣ ಕೊಡಿಸಿದ್ದು, ತಂದೆಯಿಂದಲೇ ಲೈಂಗಿಕ ಹಿಂಸೆಗೊಳಗಾದ ವನಿತಳನ್ನು ಸರ್ಕಾರ ನಡೆಸುವ ಸಂಸ್ಥೆಗಳಲ್ಲಿ ನಂಬಿಕೆಯಿಲ್ಲದುದರಿಂದ ಸ್ನೇಹಿತರೊಬ್ಬರ ಮನೆಯಲ್ಲಿ ಬಿಟ್ಟಿರುವುದು ಹೀಗೆ ಹಲವಾರು ರೀತಿಯಲ್ಲಿ ನೇರವಾಗಿ ಮಹಿಳೆಯರಿಗೆ ನೆರವು ನೀಡುವ ಪ್ರಯತ್ನವನ್ನು ಮಾಡಿದೆ. [illegible] ಪ್ರಯತ್ನ, ಗುಂಪಿನ ಸಶಕ್ತತೆ, ಹಾಗೂ ಸಂಖ್ಯಾ ಬಲದಿಂದ ಈ ಪ್ರಯತ್ನಗಳು ಯಶಸ್ವಿಯಾದವು.

ಇಂತಹ ಸಮಸ್ಯೆಗಳನ್ನು ಕೈಗೆತ್ತಿಗೊಂಡಾಗ ಹಲವಾರು ಗೊಂದಲ ಹಾಗೂ ದ್ವಂದ್ವಗಳು ಗುಂಪಿನ ಸದಸ್ಯರನ್ನು ಕಾಡಿದೆ. ಮಕ್ಕಳು ತಾಯಂದಿರ ಬಳಿ ಬರಲು ನಿರಾಕರಿಸುವುದು, ಸ್ತ್ರೀಯರೇ ಅವರ ಮನಸ್ಸು ಬದಲಾಯಿಸುವುದು ಮುಂತಾದವುಗಳ ಜೊತೆಯಲ್ಲಿ ಸಮಸ್ಯೆಗಳು ಎದುರಾದಾಗ ತಕ್ಷಣವೇ ಸ್ಟೇಷನ್‌ಗೆ, ಮನೆಗಳಿಗೆ ಗುಂಪಿನ ಎಲ್ಲ ಸದಸ್ಯರಿಗೆ ಒಟ್ಟಿಗೆ ಹೋಗಲು ಸಾಧ್ಯವೇ? ಸಹೇಲಿಗೆ ಬರುವ ಎಲ್ಲರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ದೀರ್ಘ ಕಾಲದವರೆಗೆ ಹೋರಾಡುವ ಶಕ್ತಿ ಗುಂಪಿಗಿದೆಯೆ? ತಾವು ಹುಡುಕಿದ ಪರಿಹಾರವನ್ನು ಒಂದು ಪರ್ಯಾಯ ವ್ಯವಸ್ಥೆಯನ್ನಾಗಿ ಮಾಡಲು ಸಾಧ್ಯವೆ? ಇದು ಸರ್ಕಾರ, ಪೋಲೀಸ್, ನ್ಯಾಯಾಲಯ ಮುಂತಾದವುಗಳ ಮೇಲೆ ಯಾವ ರೀತಿಯ ಪರಿಣಾಮ ಬೀರಲು ಸಾಧ್ಯ? ಈ ಗೊಂದಲಗಳು ಸದಾ ನಮ್ಮನ್ನು ಕಾಡಿದೆ.

ಈ ಕೆಲಸವನ್ನು ಒಂದು ಸಾಮಾಜಿಕ ಕಾರ್ಯ ಅಥವಾ ಕರುಣೆಯಿಂದ ಮಾಡುವ ಕೆಲಸವೆಂದು ಸಹೇಲಿ ಭಾವಿಸುವುದಿಲ್ಲ. ಸ್ತ್ರೀಯರ ಮೇಲೆ ನಡೆಯುತ್ತಿರುವ ಹಿಂಸೆಗೆ ಒಂದು ರಾಜಕೀಯ ಆಯಾಮವಿದೆಯೆಂದು ಸಹೇಲಿ ಬಲವಾಗಿ ಭಾವಿಸುತ್ತದೆ. ಎಲ್ಲ ವರ್ಗದ ಸ್ತ್ರೀಯರು ಈ ಮಾದರಿಯ ಹಿಂಸೆಗೆ ಒಳಗಾಗಿದ್ದಾರೆ. ಸಹೇಲಿ ಗುಂಪಿನಲ್ಲಿರುವ ಮಹಿಳೆಯರು ಸಹ ಇಂತಹ ಸಮಸ್ಯೆಗಳನ್ನು ಎದುರಿಸುವುದರಿಂದ, "ಅದೃಷ್ಟಹೀನ ಮಹಿಳೆಯರಿಗೆ ನೆರವು ನೀಡುತ್ತೇವೆಂಬ ಮನೋಭಾವನೆಯು ಸಹೇಲಿಯಲ್ಲಿಲ್ಲ. ಗುಂಪಿನ ಮೇಲೆ ಪರಾವಲಂಬಿಯಾಗದೆ, ಆಕೆಯ ಮುಂದಿರುವ ಹಲವಾರು ಆಯ್ಕೆಯ ಸಾಧ್ಯತೆಯನ್ನು ಚರ್ಚಿಸಿ, ಅವಳೇ ನಿರ್ಧಾರ ತೆಗೆದುಕೊಳ್ಳುವಂತೆ ಪ್ರಯತ್ನಿಸುತ್ತೇವೆ.

ಸಮಸ್ಯೆಗಳಿಗೆ ಪರಿಹಾರ ಹುಡುಕಿ ಬೇರೆಯವರು ಸಹೇಲಿಯ ಸದಸ್ಯರನ್ನ ಉನ್ನತ ಸ್ಥಾನದಲ್ಲಿಟ್ಟು ನೋಡುತ್ತಾರೆ.

(18ನೇ ಪುಟಕ್ಕೆ)

# ಸಾವಯವ ಬೇಸಾಯ

## ಮಹಿಳೆಯೊಬ್ಬರ ಅನುಭವ

ಶ್ರೀಮತಿ ಆಶಾ ಕಚ್ರು ಅವರು ಆಂಧ್ರಪ್ರದೇಶದ ಮೇಡಕ್ ಜಿಲ್ಲೆಯ ರಂಜೋಲ್ ಗ್ರಾಮದಲ್ಲಿ 6-7 ವರ್ಷಗಳಿಂದ ಸಾವಯವ ಬೇಸಾಯವನ್ನು ಮಾಡುತ್ತಿದ್ದಾರೆ. ಮೂಲತಃ ಕಾಶ್ಮೀರದವರಾದ ಆಶಾ ಅವರು ವಿದ್ಯಾಭ್ಯಾಸ, ಉದ್ಯೋಗವೆಂದು ಹೆಚ್ಚಿನ ವರ್ಷ ಕಳೆದದ್ದು ದೆಹಲಿ ಹಾಗು ಜರ್ಮನಿಯಲ್ಲಿ. ಮಹಿಳಾ ಹೋರಾಟವನ್ನು ಬೆಂಬಲಿಸುವ ಅವರು ಮಹಿಳಾ ಸಂಘಟನೆಗಳಲ್ಲೂ ಕೆಲಸ ಮಾಡಿದ್ದಾರೆ. ಈಗ ಸಾವಯವ ಬೇಸಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸಾವಯವ ಬೇಸಾಯದಲ್ಲಿ ಆಸಕ್ತಿ ಬೆಳೆಸಿಕೊಂಡಾಗ, ದೂರದ ಆಂಧ್ರಪ್ರದೇಶದಲ್ಲಿ ಸ್ನೇಹಿತರೊಬ್ಬರ ಸಹಾಯದಿಂದ ಜಮೀನನ್ನು ಖರೀದಿಸಿದರು. ಆರಂಭದಲ್ಲಿ ಅವರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯ್ತು. ಹೊಸ ಊರು, ಜನರ ಪರಿಚಯವಿಲ್ಲ, ಜೊತೆಗೆ ಒಂಟಿ! ಅವರ ಹೋರಾಟದ ಪ್ರವೃತ್ತಿಯೇ ಸಮಸ್ಯೆಗಳನ್ನು ಎದುರಿಸಲು ಸಹಾಯ ಮಾಡಿತು. ಈಗ ಇನ್ನು ಹೆಚ್ಚಿನ ಧೈರ್ಯ, ಉತ್ಸಾಹದಿಂದ ಬೇಸಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಆಶಾ ಅವರು - ಬೇಸಾಯದಲ್ಲಿ ಮಹಿಳೆ ಕುರಿತು ತಮ್ಮ ಅನುಭವವನ್ನು ಮಾನಸದೊಂದಿಗೆ ಹಂಚಿಕೊಂಡಿದ್ದಾರೆ.

ಬೇಸಾಯದಲ್ಲಿ ಕೆಲವು ವಿಷಯಗಳ ಬಗ್ಗೆ ಜ್ಞಾನ ಹಾಗು ಕೌಶಲ್ಯ ಅಗತ್ಯ. ಅವೆಂದರೆ ಭೂಮಿ, ಪಶು, ನೀರು, ಬೀಜ, ಬೇಸಾಯದ ಉಪಕರಣಗಳು, ಸಾಂಪ್ರದಾಯಿಕ ತಾಂತ್ರಿಕತೆಗಳು ಮಾರುಕಟ್ಟೆ, ಬೇಸಾಯದ ಕೆಲಸವು ಉಳುಮೆ, ಬೀಜ ಮಾಡುವುದು, ಬಿತ್ತನೆ, ಸಸಿ ನೆಡುವುದು, ನೀರಿನ ವ್ಯವಸ್ಥೆ, ನೀರಾವರಿ, ಗೊಬ್ಬರ ತಯಾರಿಕೆ, ಕೊಯಿಲು, ಶೇಖರಣೆ, ಸಂರಕ್ಷಣೆ ಗೊಬ್ಬರ ಹಾಕುವುದು, ಕೀಟ ನಿಯಂತ್ರಣ, ಕಳೆ ಕೀಳುವುದು ಇತ್ಯಾದಿಯನ್ನೊಳಗೊಂಡಿರುತ್ತದೆ.

ಬೇಸಾಯದಲ್ಲಿ ಉಪಯೋಗಿಸಲ್ಪಡುವ ಸಲಕರಣೆಗಳೆಂದರೆ ಎತ್ತು, ನೇಗಿಲು, ಗಾಡಿ, ಪಂಪ್, ಸಿಂಪಡಿಸುವ ಸಾಧನೆ ಇತ್ಯಾದಿ, ಹೆಚ್ಚಿನ ಸಲಕರಣೆಗಳನ್ನು ಗಂಡಸರೆ ಉಪಯೋಗಿಸುತ್ತಾರೆ. ಮಹಿಳೆಯರು ಹೆಚ್ಚೆಂದರೆ ಉಪಯೋಗಿಸುವುದು ಕೊಡಲಿಯನ್ನು ಮಾತ್ರ. ಅದು ಕಳೆ ಕೀಳುವ ಸಮಯದಲ್ಲಿ, ರಾತ್ರಿ ವೇಳೆಯಲ್ಲಿ ಹೆಂಗಸರು ಕೆಲಸಕ್ಕೆ ಬರುವುದಿಲ್ಲ, ಗಂಡಸರು, ಹೆಚ್ಚಿನ ಉಪಕರಣಗಳನ್ನು ಉಪಯೋಗಿಸಿ ಕೆಲಸ ಮಾಡುವುದರಿಂದ ಹಾಗು ರಾತ್ರಿ ವೇಳೆಯಲ್ಲೂ ಕೆಲಸಕ್ಕೆ ಬರುವುದರಿಂದ ಹೆಚ್ಚಿನ ಹಣ ಕೇಳುತ್ತಾರೆ.

ಭೂ ಮಾಲೀಕರು ಗಂಡಸರಾದರೂ ಕೆಲಸ ಮಾಡುವುದು ಹೆಂಗಸರು. ಶೇ. 80ರಷ್ಟು ಕೃಷಿ ಕಾರ್ಮಿಕರು ಮಹಿಳೆಯರು. ಆದರೆ ಅವರ ಗಳಿಕೆ ಮಾತ್ರ ಗಂಡಸರ ಗಳಿಕೆಯ 1/3ರಿಂದ 1/4 ಭಾಗ ಮಾತ್ರ. ಬೇಸಾಯದಲ್ಲಿ ಲಿಂಗಾಧಾರಿತ ಶ್ರಮ ವಿಭಜನೆ ತುಂಬಾ ಬಲವಾಗಿದೆ. ಉಳುಮೆಯಲ್ಲಿ ನೇಗಿಲು, ಎತ್ತನ್ನು ಉಪಯೋಗಿಸುವುದರಿಂದ, ಗಂಡಸರೆ ಉಳುಮೆ ಮಾಡುತ್ತಾರೆ. ಎತ್ತುಗಳನ್ನು ಉಪಯೋಗಿಸಿ ಹುಲ್ಲಿನಿಂದ ಕಾಳುಗಳನ್ನು ಬೇರ್ಪಡಿಸುವುದನ್ನು ಗಂಡಸರು ಮಾಡುತ್ತಾರೆ. ಉಳಿದ ಕೆಲಸಗಳಾದ ಬಿತ್ತುವುದು, ಬೀಜ ಮಾಡುವುದು, ಸಸಿ ನೆಡುವುದು, ಕೊಯಿಲು, ಸಂರಕ್ಷಣೆ ಹಾಗು ಬೇಸಾಯದಲ್ಲಿ ಬಹಳ ಮುಖ್ಯವಾದ ಕಳೆ ಕೀಳುವುದು - ಎಲ್ಲವನ್ನು ಹೆಂಗಸರು ಮಾಡುತ್ತಾರೆ. ಮಾರಾಟದಲ್ಲಿ ಗಂಡಸರದೇ ಮೇಲುಗೈ. ಮೇಲ್‌ವರ್ಗದ, ಮಹಿಳೆ ಮಾರಾಟ ಮಾಡಲು ಬರುವುದೇ ಇಲ್ಲ. ಗಂಡಸರು, ಸಣ್ಣ ಹುಡುಗರು ಮಾರಾಟ ಮಾಡುತ್ತಾರೆ. ಮಾರಾಟದಿಂದಾಗಿ ಬೇಸಾಯದಿಂದ ಬರುವ ಎಲ್ಲ ಹಣವು ಗಂಡಸರ ಕೈ ಸೇರುತ್ತದೆ. ಗೊಬ್ಬರ ಶೇಖರಣೆ ಮಾಡುವವರು ಹೆಂಗಸರು, ಹುಡುಗಿಯರು, ಗೊಬ್ಬರ ಮಾರಾಟ ಮಾಡಿ ಹಣ ಸಂಪಾದನೆ ಮಾಡುವವರು ಗಂಡಸರು. ಸಗಣಿಯನ್ನು ಹೆಂಗಸರು, ಉರುವಲಿಗೂ, ಸಂರಕ್ಷಣೆಯ ಕೆಲಸದಲ್ಲೂ ಉಪಯೋಗಿಸುತ್ತಾರೆ. ಸೌದೆ, ನೀರು ಇತ್ಯಾದಿಯನ್ನು ಹೊರುವವರು ಹೆಂಗಸರು, ಗಂಡಸರು ಸೈಕಲ್, ಗಾಡಿಯನ್ನು ಹೊರಲು ಉಪಯೋಗಿಸುತ್ತಾರೆ. ಗಾಡಿ ಓಡಿಸಲು, ಸೈಕಲ್ ತುಳಿಯಲು ಮಹಿಳೆಯರನ್ನು ಬಿಡುವುದಿಲ್ಲ. ಎಷ್ಟೊ ಸಾರಿ ಹೆಂಗಸರೇ, .ತಮಗಿಂತ ಗಂಡಸರ ಕೆಲಸವೇ ಹೆಚ್ಚಿನ ಶ್ರಮದಾಯಕ ಅವರಿಗೆ ಹೆಚ್ಚಿನ ಹಣ ಸಿಗುವುದು ಎನ್ನುತ್ತಾರೆ. ದಿನದ 6 ಗಂಟೆಗಳ ಕಾಲ ಬೆನ್ನು ಬಗ್ಗಿಸಿ, ಚಲಿಸುತ್ತ ಕಳೆ ಕೀಳುವ ಕೆಲಸ ಶ್ರಮದಾಯಕವಲ್ಲ!

ನೀರಾವರಿ, ನೀರಿನ ವ್ಯವಸ್ಥೆ ಗಂಡಸರದು. ಇಲ್ಲಿ ಪಂಪುಗಳು, ಪೈಪುಗಳು, ಮೋಟರು, ವಿದ್ಯುತ್ ಇವುಗಳ ಉಪಯೋಗಕ್ಕೆ ತಾಂತ್ರಿಕ ಕೌಶಲ್ಯ ಅಗತ್ಯ. ಇವುಗಳ ಉಪಯೋಗ ಮಹಿಳೆಯರಿಗೆ ಬರುವುದಿಲ್ಲ. ಕಲಿಯಲು ಭಯ ಅವರಿಗೆ. ಹಳ್ಳಿಯಲ್ಲಿ ವಿದ್ಯುತ್ ಪೂರೈಕೆ ರಾತ್ರಿ ಮಾತ್ರ ಇರುತ್ತದೆ. ಗಂಡಸರಷ್ಟೆ ರಾತ್ರಿ ಕೆಲಸಕ್ಕೆ ಬರುತ್ತಾರೆ. ಉಪಕರಣಗಳ ಬಳಕೆಗೆ, ರಾತ್ರಿ ಕೆಲಸಕ್ಕೆಂದು ಅವರ ಹೆಚ್ಚಿನ ಹಣ ಕೇಳುತ್ತಾರೆ.

ರಾಸಾಯನಿಕ ಗೊಬ್ಬರ ಹಾಗು ಕ್ರಿಮಿನಾಶಕಗಳ ಬಳಕೆಯಿಂದಾಗಿ ಮಹಿಳೆಯರು ಕೆಲವು ಸಮಸ್ಯೆಗಳನ್ನು ಎದುರಿಸುತ್ತಾರೆ. ಕಳೆ ಕೀಳುವುದು, ಬೇಸಾಯದಲ್ಲಿ ಬಹು ಮುಖ್ಯವಾದ ಕೆಲಸ. ಕಳೆ ನಾಶಕ ಬಂದಿರುವುದರಿಂದ ಮಹಿಳೆಯರು ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಅದಕ್ಕಾಗಿ ಯಾವ ಪರ್ಯಾಯ ವ್ಯವಸ್ಥೆಯೂ ಇಲ್ಲ.

ನಾನಿರುವ ಹಳ್ಳಿಯಲ್ಲಿ 7,000 ಕುಟುಂಬಗಳಿವೆ. ಕೇವಲ 10 ಮಹಿಳೆಯರಷ್ಟೆ ಭೂ ಮಾಲೀಕರು, ಇವರು ಸ್ವತಃ ತಾವೇ ಬೇಸಾಯದ ಕೆಲಸ ಮಾಡುತ್ತಾರೆ. ಗಂಡಸರು ಭೂಮಾಲೀಕರಾದರು ಹೊಲದಲ್ಲಿ ದುಡಿಯುವುದಿಲ್ಲ. ಬೇರೆಯವರ ಕೈಲಿ ಮಾಡಿಸುತ್ತಾ, ತಾವು ಇತರ ವ್ಯಾಪಾರ ವ್ಯವಹಾರದಲ್ಲಿ ತೊಡಗಿರುತ್ತಾರೆ. ಪುರುಷ ಕೃಷಿ ಕಾರ್ಮಿಕರು ಕೃಷಿಯಲ್ಲದೆ, ಹತ್ತಿರದ ಪೇಟೆಯಲ್ಲಿ ಇತರ ಕೂಲಿ ಕೆಲಸಗಳನ್ನು ಮಾಡುತ್ತಾರೆ. ಮಹಿಳಾ ಕೃಷಿ ಕಾರ್ಮಿಕರು ಕೃಷಿ ಕೆಲಸವನ್ನಷ್ಟೆ ಮಾಡುತ್ತಾರೆ.

ಕಲಾವತಿ ಎನ್ನುವ ಮಹಿಳೆ ನನ್ನ ಹೊಲದಲ್ಲಿ 3 ವರ್ಷಗಳಿಂದ ಕೆಲಸ ಮಾಡುತ್ತಿದ್ದಾಳೆ, ನಾಲ್ಕು ಮಕ್ಕಳಿರುವ ಈಕೆಗೆ ಇನ್ನು 30 ವರ್ಷವಾಗಿಲ್ಲ, ಬೆಳಿಗ್ಗೆ ಎದ್ದು ಹತ್ತಿರದ ಬಾವಿಯಿಂದ ನೀರು ತುಂಬಿಸಿ, ಅಡುಗೆ ಮಾಡಿ ಇತರ ಮನೆ ಕೆಲಸ ಮುಗಿಸಿ 8.30ರ ಹೊತ್ತಿಗೆ ಕೆಲಸಕ್ಕೆ ಬರುತ್ತಾಳೆ. ಮಕ್ಕಳು ಅಕ್ಕಪಕ್ಕದ ಮನೆಯಲ್ಲೋ, ಸಂಬಂಧಿಕರ ಮನೆಯಲ್ಲೋ ಇರುತ್ತಾರೆ. ದಿನಗೂಲಿ ಮಾಡುವ ಆಕೆಯ ಗಂಡ, ಕೆಲಸ ಸಿಕ್ಕರೆ ಮಾಡುತ್ತಾನೆ. ಇಲ್ಲ ತಿರುಗಿಕೊಂಡು ಇರುತ್ತಾನೆ, ಮನೆಗೆಲಸ, ಮಕ್ಕಳ ಪಾಲನೆ ಬಗ್ಗೆ ಅವನಿಗೆ ಚಿಂತೆಯೇ ಇಲ್ಲ. ಕೆಲಸವಿಲ್ಲದಿದ್ದರು, ಹೆಂಡತಿಯ ಕೆಲಸದಲ್ಲಿ ಕೈ ಕೂಡಿಸುವುದಿಲ್ಲ. ಕಳೆ ಕೀಳುವುದು, ಬಿತ್ತನೆ ಗೊಬ್ಬರ ಹಾಕುವುದು, ಸಸಿ ನೆಡುವುದು, ಕೊಯಿಲು, ಸ್ವಚ್ಛ ಮಾಡುವುದು, ತೂರುವುದು. ಈ ಎಲ್ಲ ಕೆಲಸ ಗೊತ್ತಿರುವ ಅವಳು ಕೆಲಸ ಮುಗಿಸಿ ಹೊಲಿಗೆ ಕ್ಲಾಸಿಗೆ ಓಡುತ್ತಾಳೆ. ಅಲ್ಲಿಂದ ಸಂಜೆ ಮನೆಗೆ ಹೋಗಿ ಮತ್ತೆ ಮನೆಗೆಲಸ ಮಾಡುತ್ತಾಳೆ. ಸಂಪಾದಿಸಿದ ಹಣವನ್ನು ಮನೆಗೆ ಬೇಕಾದ ಸಾಮಾನು ತರಲೆಂದು ಗಂಡನಿಗೆ ಕೊಡುತ್ತಾಳೆ. ಅವನು ತನ್ನ ಕೂಲಿಯನ್ನು ಮನೆಗೆ ಕೊಡುವುದು ವಿರಳ. ಕುಡಿದು ಬರುವ ಅವನನ್ನು ಸಂಬಳ ಕೇಳಿದರೆ ಹೊಡೆಯುತ್ತಾನೆ. ಯಾವಾಗಲು ನಗುನಗುತ್ತಾ ಕೆಲಸ ಮಾಡುವ ಅವಳಿಗೆ ಎಷ್ಟು ದುಡಿದರು, ಮಕ್ಕಳ ಅಗತ್ಯ ಪೂರೈಸಲು ಆಗುವುದಿಲ್ಲ. ಅವಳ ಗಂಡ, ಗಂಡಸೆಂಬ ಕಾರಣಕ್ಕೆ ಯಾವ ಕೌಶಲ್ಯವಿಲ್ಲದಿದ್ದರೂ ಹೆಚ್ಚಿನ ಕೂಲಿ ಪಡೆಯುತ್ತಾನೆ, ಕೃಷಿ ಕೆಲಸ ಮಾಡುವ ಹೆಂಗಸರು ಒಬ್ಬರೆ ಹೊರಗೆಲ್ಲೂ ಹೋಗುವುದಿಲ್ಲ. ಒಬ್ಬರೆ ಹೊಲದಲ್ಲಿ ಕೆಲಸ ಮಾಡುವಾಗ ಅತ್ಯಾಚಾರಕ್ಕೊಳಗಾದ ಘಟನೆಗಳಿವೆ. ಅತ್ಯಾಚಾರಕ್ಕೊಳಗಾದ ಮಹಿಳೆಯರು ಮೌನವಾಗಿ ಸಹಿಸಿಕೊಂಡಿದ್ದರೆ, ಅತ್ಯಾಚಾರಿಗಳು ಆರಾಮವಾಗಿ ಓಡಾಡಿಕೊಂಡಿರುತ್ತಾರೆ. ಪೋಲೀಸ್ ಠಾಣೆಯಲ್ಲಿ ಅತ್ಯಾಚಾರದ ಕೇಸನ್ನು ಯಾರೂ ದಾಖಲಿಸಿಲ್ಲ!

ಮಹಿಳೆಯರು ದುಡಿದು ಸಂಸಾರ ನಡೆಸಿದರೆ, ಪುರುಷರು ನನ್ನಿಂದಲೆ ಅವರು ಚೆನ್ನಾಗಿರುವುದೆಂದು ಬೀಗಿಕೊಂಡು ಹೇಳುತ್ತಾರೆ.

- ಆಶಾ ಕಚ್ರು

(ಅನು: ಸರಸ್ವತಿ ದು.)

---

(16ನೇ ಪುಟದಿಂದ)

ವಕೀಲರು, ಡಾಕ್ಟರನ್ನು ಭೇಟಿಯಾದಾಗಲೂ ಈ ಮನೋಭಾವನೆ ಬೆಳೆಯುತ್ತಾ ಹೋಗುತ್ತದೆ. ಇದು ಅಸಮಾನ ಸಂಬಂಧದ ಎಳೆಯನ್ನು ಪ್ರಾರಂಭಿಸುತ್ತದೆ. ಸಹೇಲಿಯ ಸದಸ್ಯರು ಈ ಅಂಶವನ್ನು ಬಲವಾಗಿ ವಿರೋಧಿಸುತ್ತಾರೆ. ಈ ಅಸಮಾನತೆಯ ಎಳೆಯನ್ನು ಕಡಿಮೆ ಮಾಡಲು, ಪರಸ್ಪರ ಚರ್ಚೆ, ಗುಂಪಿನ ಸದಸ್ಯರ ಸಮಸ್ಯೆಗಳನ್ನು ಹಂಚಿಕೊಳ್ಳುವುದು, ವಿವಿಧ ಆಯ್ಕೆಯ ಅವಕಾಶಗಳನ್ನು ಚರ್ಚಿಸುವುದು, ಮುಂತಾದವುಗಳನ್ನು ಸಹೇಲಿ ಗಂಭೀರವಾಗಿ ಪರಿಗಣಿಸುತ್ತದೆ. ಹೀಗಿದ್ದರೂ ಶ್ರೇಣೀಕೃತ ಸಂಬಂಧವನ್ನು ತಪ್ಪಿಸುವುದು ಸರಳವಾದ ಪ್ರಶ್ನೆಯೇನಲ್ಲ. ಅಸಹಾಯಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಬರುವ ಸ್ತ್ರೀಯರು ಹಾಗೂ ನಮ್ಮ ನಡುವೆ ಈ ಶ್ರೇಣೀಕೃತ ಸಂಬಂಧ ಅನಿವಾರ್ಯವಾಗಿ ಎಂದಾಗುತ್ತಿತ್ತು. ನಮ್ಮ ನಡುವಿರುವ ವರ್ಗ ವ್ಯತ್ಯಾಸಗಳೂ ಸಹ ಈ ಮಾದರಿಯ ಸಂಬಂಧಗಳನ್ನು ಬಲಪಡಿಸುತ್ತದೆ.

ವೈಯಕ್ತಿಕ ಸಮಸ್ಯೆಗಳ ಪರಿಹಾರಕ್ಕೆ ಬರುವ ಮಹಿಳೆಯರನ್ನು ತಮ್ಮ ಚಟುವಟಿಕೆ ಹಾಗೂ ಇತರ ಚಳುವಳಿಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡುವುದರಿಂದ ಇಂತಹ ಸಮಸ್ಯೆಗಳನ್ನು ಕಡಿಮೆ ಮಾಡಬಹುದು.

ಮಹಿಳೆಯರಿಗೆ ಅತ್ಯಗತ್ಯವಾದ ಪೂರಕವಾದ ವ್ಯವಸ್ಥೆಗಾಗಿಯು ಸಹೇಲಿ ಪ್ರಯತ್ನಿಸಿದೆ. ಸರ್ಕಾರ ನಡೆಸುವ ಸಂಸ್ಥೆಗಳು ಸ್ತ್ರೀವಿರೋಧಿಯಾಗಿ ಕೆಲಸ ಮಾಡುವುದರಿಂದ ಸಹೇಲಿಯ ಈ ಪ್ರಯತ್ನ ಮಾಡುವುದು ಅನಿವಾರ್ಯವಾಯಿತು. ಹಿಂಸೆಗೆ, ಕ್ರೌರ್ಯಕ್ಕೆ ಒಳಗಾದ ಮಹಿಳೆಯರು ಮನೆಯಲ್ಲಿಯೆ ಇದ್ದು ಹೋರಾಡುವುದು ಅಸಾಧ್ಯ. ಸಮಾಜದ ಇತರ ಸಮಸ್ಯೆಗಳಿಂದ ಮಹಿಳೆಯರ ವಿಶಿಷ್ಟ ಸಮಸ್ಯೆಗಳನ್ನು ಪ್ರತ್ಯೇಕಿಸಿ ಹೋರಾಡುವುದು, ಮಾನಸಿಕ ಕುಗ್ಗುವಿಕೆ, ಯಾಂತ್ರೀಕೃತ ಧೋರಣೆ, ಸೂಕ್ಷ್ಮತೆಯನ್ನು ಕಳೆದುಕೊಳ್ಳುವುದು, ಮುಂತಾದ ಸಮಸ್ಯೆಗಳು ಸಹೇಲಿಯ ಸದಸ್ಯರನ್ನು ಕಾಡುತ್ತಿದ್ದವು. 10 ವರ್ಷಗಳ ಈ ಅನುಭವಗಳನ್ನು, ಹೊಳವುಗಳನ್ನು ಚರ್ಚಿಸಿ, ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳುವುದು, ಅತ್ಯಗತ್ಯವೆಂದು ಸಹೇಲಿ ಭಾವಿಸುತ್ತದೆ.

# ಇದು ಮಾನವ ಹಕ್ಕುಗಳ ದಮನವೆ?

- ಡಾ. ಎಸ್. ವಿ. ಪ್ರಭಾವತಿ

ಪುಣೆಯ ಮಾನಸಿಕ ರೋಗಿಗಳ ಚಿಕಿತ್ಸಾಲಯವೊಂದರಲ್ಲಿ ಇತ್ತೀಚೆಗೆ ಹದಿನೈದರಿಂದ ಇಪ್ಪತ್ತೈದರ ವಯಸ್ಸಿನೊಳಗಿರುವ ಹನ್ನೊಂದು ಮಂದಿ ಸ್ತ್ರೀಯರಿಗೆ (ಇವರೆಲ್ಲ ಮಾನಸಿಕವಾಗಿ ಅಸ್ವಸ್ಥರು) ಅವರ ಗರ್ಭಕೋಶವನ್ನು ಶಸ್ತ್ರಚಿಕಿತ್ಸೆಯ ಮೂಲಕ "ತೆಗೆದು ಹಾಕಲಾದ" ಸುದ್ದಿ ಇಡೀ ರಾಷ್ಟ್ರಾದ್ಯಂತ ವಿವಾದಗಳ ಕಿಡಿ ಹಾರಿಸಿದೆ. ತಮ್ಮನ್ನು ತಾವೇ ಸಂಭಾಳಿಸಿಕೊಳ್ಳಲಾಗದ ಈ ಸ್ತ್ರೀಯರ ಗರ್ಭಕೋಶವು, ಒಂದು ಮಗುವಿಗೆ ಜನ್ಮ ನೀಡಿ, ಅದನ್ನು ಸರಿಯಾಗಿ ಬೆಳೆಸುವ ಕಾರ್ಯಕ್ಕೆ "ನಿರುಪಯೋಗಿ" ಯಾಗಿರುವುದರಿಂದ ನಮಗೆ ಬೇಡವಾದ ಪದಾರ್ಥಗಳನ್ನು ಬಿಸುಡುವಷ್ಟೇ ಸುಲಭವಾಗಿ ಇವರ ಗರ್ಭಕೋಶಗಳನ್ನು ಕಿತ್ತೆಸೆದ ಘಟನೆ ಎಲ್ಲರ ಗಮನಕ್ಕೆ ಬರಬೇಕು, ಅಷ್ಟೇ ಅಲ್ಲ, ಇದರಲ್ಲಿ ಒಂದು ಜನಾಂಗದ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಸಂಘರ್ಷವೂ ಇರುವುದರಿಂದ ಎಲ್ಲರೂ ಮತ್ತೆ ಮತ್ತೆ ಯೋಚಿಸುವಂಥದೂ ಆಗಿದೆ. ಈ ಶಸ್ತ್ರ ಚಿಕಿತ್ಸೆ ರಾಜ್ಯ ಸರ್ಕಾರದ ಅಪ್ಪಣೆಯಂತೆ ನಡೆದಿರುವುದರಿಂದ ವಾಸ್ತವವಾಗಿ ಆ ಮನೋರೋಗಿಗಳು "ಕಾಪಾಡಲ್ಪಟ್ಟರೇ" ಅಥವಾ "ಶೋಷಿಸಲ್ಪಟ್ಟರೇ" ಎಂಬ ಚರ್ಚೆ ನಡೆಯಬೇಕಾಗಿತ್ತು, ಆದರೆ ನಡೆಯಲಿಲ್ಲ.

ಶಸ್ತ್ರ ಚಿಕಿತ್ಸೆಯು ಪುಣೆಯ ಸರ್ಕಾರೀ ಆಸ್ಪತ್ರೆಯಲ್ಲಿ ನಡೆದು, ಸಮೂಹ ಮಾಧ್ಯಮಗಳ ಪ್ರತಿಭಟನೆ ಬಂದ ಮೇಲೆ ರಾಜ್ಯದ ಮುಖ್ಯಮಂತ್ರಿ (ಆಗಿನ, ಅಂದರೆ 1994ರ ಮುಖ್ಯಮಂತ್ರಿ) ತತ್ಕಾಲಕ್ಕೆ ಒಂದು ತಡೆಯಾಜ್ಞೆ ಹೊರಡಿಸಿದಂತೆ ಮಾಡಿ, ಅನಂತರ ಅದನ್ನು ತೆಗೆದದ್ದೂ ಆಯಿತು. ಮಾನಸಿಕ ಸ್ತ್ರೀ ರೋಗಿಗಳಿಗೆಂದೇ, ಸರ್ಕಾರವೇ ನಡೆಸುತ್ತಿರುವ ಚಿಕಿತ್ಸಾಲಯದ ರೋಗಿಗಳದೇ ಈ ಪಾಡು ಎಂದ ಮೇಲೆ ಇನ್ನುಳಿದ ಆಸ್ಪತ್ರೆಗಳ ವಿಷಯ ಏನು ಹೇಳುವುದು? ಈ ಮಾನಸಿಕ ರೋಗಿಗಳ ತಂದೆ ತಾಯಿಗಳು ಇಂತಹ ಶಸ್ತ್ರ ಚಿಕಿತ್ಸೆಗಳಿಗೇನು ಹೇಳುತ್ತಾರೆ ಎಂಬುದಂತೂ ಸ್ವಾರಸ್ಯಕರವಾಗಿದೆ. ಉಮೇದ್ ಪರಿವಾರ್ ಎಂಬ ಇಂತಹ ತಂದೆ ತಾಯಿಗಳ ಒಂದು ಸಂಸ್ಥೆ ಈ ಶಸ್ತ್ರ ಚಿಕಿತ್ಸೆಯನ್ನು ಪ್ರೋತ್ಸಾಹಿಸುವುದಲ್ಲದೇ, ಇದನ್ನು ವಿರೋಧಿಸುವವರ ಬಗ್ಗೆ ಕೆಂಡ ಕಾರಿದೆ. ಸರ್ಕಾರದ ಆದೇಶದಂತೆ ಈ ಶಸ್ತ್ರ ಚಿಕಿತ್ಸೆಗಳನ್ನು ನೆರವೇರಿಸಿದ ಡಾ. ಶಿರೀಶ್ ಶೇಠ್ ಹೇಳುತ್ತಾರೆ.

"ಈ ಘಟನೆಯ ಬಗ್ಗೆ ದಿವ್ಯ ನಿರ್ಲಕ್ಷ್ಯದಿಂದ ಹಿಡಿದು ಆಕ್ರೋಶದವರೆಗೆ ಪ್ರತಿಕ್ರಿಯೆಗಳಿವೆ, ಆಕ್ರೋಶ ಏಕೋ ತಿಳಿಯದು. ಬಹುಶಃ ಅಷ್ಟೊಂದು ಮಂದಿಗೆ ಒಟ್ಟಿಗೇ ಶಸ್ತ್ರ ಚಿಕಿತ್ಸೆ ಮಾಡಿದ್ದಕ್ಕಿರಬೇಕು!" ಇಂಡಿಯನ್ ಮೆಡಿಕ್ ಅಸೋಸಿಯೇಷನ್ನಿನ ಪುಣೆಯ ಶಾಖೆಯ ಅಧ್ಯಕ್ಷರಾದ ಡಾ. ಸುರೇಶ್ ದೇಶಪಾಂಡೆ ಹೇಳುತ್ತಾರೆ

"ತೀವ್ರ ಮಾನಸಿಕ ರೋಗದಿಂದ ಬಳಲುತ್ತಿರುವ ಹೆಂಗಸರ ಯೋನಿಗಳನ್ನೇ ಮುಚ್ಚಿಬಿಟ್ಟರೂ ಚಿಂತೆಯಿಲ್ಲ"

ಸರ್ಕಾರ ಈ ವಿಷಯದಲ್ಲಿ ತಲೆ ಹಾಕುವುದೇ ದಬ್ಬಾಳಿಕೆ ಎಂದು ಭಾವಿಸುವ ಮಹಿಳಾ ಸಂಘಟನೆಗಳನ್ನು ಕುರಿತು ಸಮಾಜ ಸುಧಾರಕರು ಹೇಳುತ್ತಾರೆ.

"ಮೂರು ವರ್ಷದ ಮಗುವಿನ ಬುದ್ಧಿಯಿರುವ, ತಮ್ಮ ತಿಂಗಳ ಮುಟ್ಟಿನ ರಕ್ತದೊಂದಿಗೆ ಮತ್ತು ಸೊಂಟಕ್ಕೆ ಕಟ್ಟಿಕೊಳ್ಳಲು ಕೊಟ್ಟ ನ್ಯಾಪ್‌ಕಿನ್‌ಗಳೊಂದಿಗೆ ಆಟವಾಡುವ ಈ ಮಹಿಳೆಯರು ಗರ್ಭಿಣಿಯರಾಗದಂತೆ ತಡೆಯುವ ಈ ಶಸ್ತ್ರ ಚಿಕಿತ್ಸೆಯಲ್ಲಿ ಖಂಡಿತಾ ತಪ್ಪಿಲ್ಲ!"

ಈ ಕಾಳಜಿಗೇನು ಕಾರಣ?

ಈ ಮಾನಸಿಕ ರೋಗಿಗಳು ಮದುವೆಯಾದರಲ್ಲವೆ ಗರ್ಭಿಣಿಯರಾಗುವುದು?

ಅಲ್ಲ ಇದು ಅಷ್ಟು ಸರಳವಲ್ಲ... ಇದು ಬಹುಶಃ ಇವರು ಗರ್ಭಿಣಿಯರಾಗುವುದೆಂದರೆ ಮೂರು ವರ್ಷದ ಮಗುವಿನ ಮನಸ್ಸಿರುವ ಇವರಿಗೆ ಸೆಕ್ಸ್ ಅಂದರೇನು ಗೊತ್ತೆ? ಇವರನ್ನು ಯಾರು ಮದುವೆಯಾಗುತ್ತಾರೆ!? ಅಂದರೆ... ಇವರು

*(22ನೇ ಪುಟಕ್ಕೆ)*

# ಮಹಿಳಾ ನಿರ್ವಾಹಕರು

*ಪುರುಷರಿಗಷ್ಟೇ ಸೀಮಿತವಾಗಿದ್ದ ಕ್ಷೇತ್ರಗಳಲ್ಲಿ, ಇಂದು, ಮಹಿಳೆಯರೂ ದುಡಿಯುತ್ತಿದ್ದಾರೆ. ಸಮರ್ಥವಾಗಿಯೂ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಉದಾಹರಣೆಗೆ ನಮ್ಮ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ನಿರ್ವಾಹಕರ ಹುದ್ದೆ, 65,000 ಕಾರ್ಮಿಕರಿರುವ ಈ ಸಂಸ್ಥೆಯಲ್ಲಿ, ಮಹಿಳೆಯರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. ಸಂಖ್ಯೆಯಲ್ಲಿ ಹಿಂದೆ ಬಿದ್ದರೂ ಕೆಲಸದಲ್ಲಿ ಹಿಂದೆ ಬಿದ್ದಿಲ್ಲ. ನಿರ್ವಾಹಕರಾಗಿ ಅವರ ಅನುಭವವನ್ನು ತಿಳಿದುಕೊಳ್ಳಲು, ನಿರ್ವಾಹಕಿಯಾಗಿ ಕೆಲಸ ಮಾಡುತ್ತಿರುವ ಕುಮಾರಿ ಮಂಜುಳಾ ಇ. ಅವರೊಂದಿಗೆ ನಡೆಸಿದ ಮಾತುಕತೆಯನ್ನು ಈ ಲೇಖನದಲ್ಲಿ ನೀಡಲಾಗಿದೆ.*

***1. ನೀವು ಎಷ್ಟು ವರ್ಷಗಳಿಂದ ಈ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೀರಿ? ಹಾಗು ಈ ಹುದ್ದೆಯನ್ನು ಏಕೆ ಆರಿಸಿಕೊಂಡಿರಿ?***

ನಾನು 1993 ಫೆಬ್ರವರಿ 17ರಂದು ನಿರ್ವಾಹಕಿಯಾಗಿ ಆಯ್ಕೆಗೊಂಡೆ. ನಾನು S.S.L.C.ಯಷ್ಟೇ ಓದಿದ್ದೆ. ನನ್ನ ಸ್ನೇಹಿತನೊಬ್ಬ First Aid Course ಆಗಿದ್ದರೆ ಕಂಡಕ್ಟರ್ ಹುದ್ದೆಗೆ ಅರ್ಜಿ ಹಾಕಿಕೊಳ್ಳಬಹುದು ಎಂದ. ನಾನು ಕೂಡಲೆ First Aid Course ಮಾಡಿಕೊಂಡು ಅರ್ಜಿ ಹಾಕಿದೆ. ನಾನು ಕೊಂಚ ಸಾಹಸಿ ಪ್ರವೃತ್ತಿಯವಳು. ಇದೊಂದು ವಿಭಿನ್ನವಾದ ಕೆಲಸ ಎಂದುಕೊಂಡು ಸಂಸ್ಥೆ ಸೇರಿದೆ.

***2. ಈ ಸಂಸ್ಥೆಯಲ್ಲಿ ಎಷ್ಟು ಜನ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ? ಯಾವ ಯಾವ ಹುದ್ದೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ?***

ನಮ್ಮ ಸಂಸ್ಥೆಯಲ್ಲಿ 29 ಜನ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಅವರಲ್ಲಿ ಮೂವರು ಆಫೀಸ್ ಅಸಿಸ್ಟೆಂಟ್‌ಗಳಾಗಿ ಕೆಲಸ ಮಾಡುತ್ತಿದ್ದಾರೆ. ಉಳಿದವರು ನಿರ್ವಾಹಕರಾಗಿ ಕೆಲಸ ಮಾಡುತ್ತಿದ್ದಾರೆ. ಕೆಲವರು ಬುಕಿಂಗ್ ಕೌಂಟರ್‌ನಲ್ಲಿ ಹಾಗು ಟ್ರಾಫಿಕ್ ಕಂಟ್ರೋಲರ್‌ಗಳಾಗಿಯೂ ಕೆಲಸ ಮಾಡಿದ್ದಾರೆ. Sweepersಗಳಾಗಿಯೂ ಕೆಲಸ ಮಾಡುತ್ತಿದ್ದಾರೆ. ನಮ್ಮ ಸಂಸ್ಥೆಯಲ್ಲಿ Direct appoint ಆಗಿ ಬಂದಿರುವವರು ತೀರಾ ಕಮ್ಮಿ. ಇಲಾಖೆಯಲ್ಲಿ ಕೆಲಸ ಮಾಡುವ ಕಾರ್ಮಿಕರು ಮರಣ ಹೊಂದಿದರೆ, ಅವರ ಹೆಂಡತಿಯರಿಗೆ ಕೆಲಸ ಕೊಡುವ ವ್ಯವಸ್ಥೆ ನಮ್ಮಲ್ಲಿ ಇದೆ. ಹಾಗಾಗಿ ವಿಧವೆಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

***3. ನಿಮ್ಮ ಕೆಲಸದ ಪರಿಸ್ಥಿತಿ ಹೇಗಿದೆ?***

ಯಾವ ತಕರಾರು ಇಲ್ಲ. ನಾವು ಸಾಮಾನ್ಯವಾಗಿ General Shift (8ರಿಂದ 4.30ರವರೆಗೆ) ಮಾತ್ರ ಮಾಡುವುದು. ನಮ್ಮ ದಿನದ ಕೆಲಸವೆಂದರೆ ಟಿಕೇಟ್ ಕೊಡುವುದು, ಎಂಟ್ರಿ ಹಾಕುವುದು, ಹಣವನ್ನು ಡಿಪೋಗೆ ಕಟ್ಟುವುದು. ಆಫೀಸ್ ಸಮಯದಲ್ಲಿ ತುಂಬಾ ರಶ್ ಇರುತ್ತದೆ. ಅಂತಹ ವೇಳೆಯಲ್ಲಿ ಕೆಲಸ ಕಷ್ಟವಾಗಿರುತ್ತದೆ. ಉಳಿದಂತೆ ತೊಂದರೆ ಇರುವುದಿಲ್ಲ.

***4. ಸಂಸ್ಥೆಯಲ್ಲಿ ನಿಮಗೆ ಸಿಗುವ ಸೌಲಭ್ಯಗಳೇನು?***

ನಮಗೆ ಸಿಗುವ ಸೌಲಭ್ಯಗಳೆಂದರೆ ವೇತನ (ವೇತನವು - ಮೂಲ ವೇತನ, ತುಟ್ಟಿ ಭತ್ಯೆ, ನಗರ ಪರಿಹಾರ ಧನ, ಬಾಡಿಗೆ, ವಾಶಿಂಗ್ ಚಾರ್ಜ್‌ಗಳನ್ನೊಳಗೊಂಡಿದೆ), ಅಲ್ಲದೆ, ವರ್ಷಕ್ಕೊಮ್ಮೆ 2 ಸೀರೆ, 2 ಕೋಟು, ಪಾದರಕ್ಷೆ ಹಾಗೂ ಹೊಲಿಗೆ ವೆಚ್ಚವನ್ನು ಕೊಡಲಾಗುತ್ತದೆ. ನಮಗೆ 15 ದಿನಗಳ C.L, 15 ದಿನಗಳ P.L ಹಾಗು Medical Leaveಗಳ ರಜೆ ಸೌಲಭ್ಯವಿದೆ. ಹೆರಿಗೆ ರಜೆ ಉಂಟು. ಬೇಕೆಂದರೆ ಹೆರಿಗೆ ರಜೆಯನ್ನು 2 ವರ್ಷಗಳವರೆಗೆ ಮುಂದುವರಿಸಬಹುದು (ವೇತನವಿಲ್ಲದೆ)

***5. ಮಹಿಳಾ ನಿರ್ವಾಹಕಿಯರೊಂದಿಗೆ, ಸಹೋದ್ಯೋಗಿಗಳ ಹಾಗು ಸಾರ್ವಜನಿಕರ ವರ್ತನೆ ಹೇಗಿದೆ?***

ಸಹೋದ್ಯೋಗಿಗಳು ನಮ್ಮೊಂದಿಗೆ ತುಂಬಾ ಸಹಕರಿಸುತ್ತಾರೆ. ಗೌರವದಿಂದ ಕಾಣುತ್ತಾರೆ, ಸಾರ್ವಜನಿಕರು - ಕೆಲವರು ಗೌರವದಿಂದ ಕಾಣುತ್ತಾರೆ, ಕೆಲವರು ಕೆಟ್ಟದಾಗಿಯೂ ವರ್ತಿಸುತ್ತಾರೆ.

*6. ನಿರ್ವಾಹಕಿಯರಾಗಿ, ಬಸ್‌ನಲ್ಲಿ ನೀವು ಎದುರಿಸುವ ಸಮಸ್ಯೆಗಳೇನು? ಹೇಗೆ ಎದುರಿಸುತ್ತೀರಿ?*

ಕೆಲವು ಗಂಡಸರು ಕಿಂಡಲ್ ಮಾಡಲೆಂದೇ ಬರುತ್ತಾರೆ, Foot boardನಲ್ಲಿ ನಿಲ್ಲುವುದು, ರಶ್ ಜಾಸ್ತಿ ಇದ್ದಾಗ ಓಡಾಡಲು ಜಾಗ ಕೊಡದೆ ನಿಲ್ಲುವುದು, ಸುಮ್ಮನೆ ಬೆಲ್ ಒತ್ತುವುದು, ಮೈಕೈ ಮುಟ್ಟುವುದು, ಇಂತಹವು ಮಾಮೂಲಿಯಾಗಿ ನಡೆಯುತ್ತೆ. ಘಟನೆ ಅತಿರೇಕಕ್ಕೆ ಹೋದರೆ, ಡ್ರೈವರ್‌ಗಳು ಬಸ್ ನಿಲ್ಲಿಸಿ ಸಹಾಯಕ್ಕೆ ಬರುತ್ತಾರೆ. ಕೆಲವೊಮ್ಮೆ ಸಾರ್ವಜನಿಕರೆ ಬಂದು, ತೊಂದರೆ ಕೊಟ್ಟವರನ್ನು ಬಸ್‌ನಿಂದ ಇಳಿಸಿದ್ದು ಉಂಟು. ಹೆಚ್ಚಿನ ಸಮಯ ನಾನೆ ಚೆನ್ನಾಗಿ ಬೈಯ್ದು ಕೆಳಗಿಳಿಸಿದ್ದೇನೆ.

*7. ನಿಮ್ಮಲ್ಲಿ ಎಷ್ಟು ಯೂನಿಯನ್‌ಗಳಿವೆ? ಯೂನಿಯನ್‌ನಲ್ಲಿ ಮಹಿಳೆಯರು ಆಫೀಸ್ ಬೇರರ್‌ಗಳಾಗಿ ಕೆಲಸ ಮಾಡುತ್ತಿದ್ದಾರೆಯೇ?*

ನಮ್ಮಲ್ಲಿ ಎರಡು ಪ್ರಮುಖ ಯೂನಿಯನ್‌ಗಳಿವೆ. ಒಂದು AITUC ಹಾಗು ಇನ್ನೊಂದು NSUI. ಎಲ್ಲೋ ಒಂದಿಬ್ಬರಷ್ಟೆ ಯೂನಿಯನ್‌ನಲ್ಲಿ ಆಫೀಸ್ ಬೇರರ್‌ಗಳಾಗಿ ಕೆಲಸ ಮಾಡುತ್ತಿದ್ದಾರೆ. Union ಕೆಲಸಗಳಲ್ಲಿ ಹೆಚ್ಚು ಸಕ್ರಿಯವಾಗಿ ಮಹಿಳೆಯರು ಪಾಲ್ಗೊಳ್ಳುವುದಿಲ್ಲ. ಮುಷ್ಕರವಿದ್ದರೆ ನಾವು ಬಂದು ಕೆಲಸ ಮಾಡುವುದಿಲ್ಲ. ಆದರೆ ಧರಣಿ ಕುಳಿತರೆ, ಪ್ರತಿಭಟನಾ ಮೆರವಣಿಗೆಯಿದ್ದರೆ ಮಹಿಳೆಯರು ಬರುವುದೇ ಇಲ್ಲ, ಹೊಡೆದಾಟ ನಡೆಯಬಹುದೆಂಬ ಭಯದಿಂದ ನಾವು ಪಾಲ್ಗೊಳ್ಳುವುದಿಲ್ಲ.

*8. ನಿಮ್ಮ ಮುಖ್ಯವಾದ ಬೇಡಿಕೆಗಳೇನು? ನಿಮ್ಮ ಬೇಡಿಕೆಗಳನ್ನು ಯೂನಿಯನ್ ತೆಗೆದುಕೊಂಡಿದೆಯೆ?*

ಮನೆ ಹಾಗು ಕೆಲಸ ಎರಡರ ಒತ್ತಡದಿಂದಾಗಿ ಮಹಿಳೆಯರಿಗೆ Second Shift (ಮಧ್ಯಾನ 2ರಿಂದ ರಾತ್ರಿ 10ರವರೆಗೆ) ಹಾಗು O.T (ಬೆಳಗ್ಗೆ 8ರಿಂದ ರಾತ್ರಿ 8ರವರೆಗೆ) ಮಾಡಲಾಗುವುದಿಲ್ಲ. ಆದ್ದರಿಂದ Second Shift ಹಾಗು O.T ಬೇಡವೆನ್ನುವುದು ನಮ್ಮ ಮುಖ್ಯ ಬೇಡಿಕೆ. ಇದಲ್ಲದೆ ನಮಗೆ ಗಂಜಿ, ಇಸ್ತ್ರಿಗಳ ರೇಜಿಗೆಯಿಲ್ಲದೆ ಸುಲಭವಾಗಿ ಒಗೆದು ಮಡಿಸಿ, ಉಡಬಹುದಾಗ ಉತ್ತಮ ಗುಣಮಟ್ಟದ Uniform ಬೇಕು.

ನಮ್ಮ ಬೇಡಿಕೆಗಳನ್ನು ಯೂನಿಯನ್‌ನವರು ಗಂಭೀರವಾಗಿ ಪರಿಗಣಿಸುತ್ತಾರೆ. ತಕ್ಷಣ ಕಾರ್ಯಪ್ರವೃತ್ತರಾಗಿದ್ದಾರೆ. ಇತ್ತೀಚೆಗೆ ನಮಗೆ O.T. (8ರಿಂದ) ಮಾಡಲೇಬೇಕೆಂಬ ಆಜ್ಞೆ ಬಂದಿತ್ತು. O.T ಮಾಡಲು ನಮಗೆ ಸಾಧ್ಯವಿಲ್ಲದ ಕಾರಣ, ಯೂನಿಯನ್‌ನವರನ್ನು ಭೇಟಿ ಮಾಡಿದೆವು. ಅವರು ನಮ್ಮನ್ನು ಬೆಂಬಲಿಸಿದ್ದರಿಂದಾಗಿ ಒಂದೇ ದಿನದಲ್ಲಿ ಆಜ್ಞೆ ರದ್ದಾಯಿತು.

*9. ಖಾಸಗೀಕರಣದ ಬಗ್ಗೆ ನಿಮ್ಮ ಅನಿಸಿಕೆಯೇನು?*

ಖಾಸಗೀಕರಣವನ್ನು ನಾನು ವಿರೋಧಿಸುತ್ತೇನೆ, ನಮ್ಮದು ಸಾರ್ವಜನಿಕ ಸಂಸ್ಥೆ. ಏನೇ ತಪ್ಪಾಗಲಿ, ತೊಂದರೆಯಾಗಲಿ ಸಾರ್ವಜನಿಕರು ನೇರವಾಗಿ ಸಂಸ್ಥೆಯನ್ನು ಕೇಳಬಹುದು ಅಥವಾ ದುಡಿಸಬಹುದು. ಖಾಸಗಿ ಸಂಸ್ಥೆಯಲ್ಲಿ ಇದು ಸಾಧ್ಯವೆ ಹೇಳಿ? ಖಾಸಗಿ ಸಂಸ್ಥೆಗಳಲ್ಲಿ 8 ಗಂಟೆಯಷ್ಟೆ ದುಡಿಯಬೇಕೆಂಬ ನಿಯಮವಿಲ್ಲ. ಅವರು ಬಸ್‌ಗಳ Maintainance ಅನ್ನು ಚೆನ್ನಾಗಿ ಮಾಡುವುದಿಲ್ಲ. ಹೆಚ್ಚಿನ ಕಾರ್ಮಿಕರನ್ನು ತೆಗೆದುಕೊಳ್ಳುವುದಿಲ್ಲ. ನಮ್ಮ ಸಂಸ್ಥೆಯಲ್ಲಿ 65,000 ಕಾರ್ಮಿಕರಿದ್ದಾರೆ. ಕಾರ್ಮಿಕರಿಗೆ ಬೇಕಾದ ಸೌಲಭ್ಯಗಳಿವೆ. ಯಾವ ಖಾಸಗಿ ಸಂಸ್ಥೆ ಇಷ್ಟು ಜನ ಕಾರ್ಮಿಕರನ್ನು ಇಟ್ಟುಕೊಂಡು ಸಮರ್ಥವಾಗಿ ನಡೆಸುತ್ತಿವೆ ಹೇಳಿ? ಗಾಡಿ ಕೆಟ್ಟು ನಿಂತರೆ, ಪ್ರಯಾಣಿಕರಿಗೆ ತೊಂದರೆಯಾಗದಂತೆ, ಬೇರೆ ಬಸ್ ನಿಲ್ಲಿಸಿ ಹೋಗುವಂತ ವ್ಯವಸ್ಥೆ ಮಾಡುತ್ತೇವೆ. ಬಸ್‌ಗಳ Maintainanceಗೆಂದೆ ನಮ್ಮಲ್ಲಿ ಬೇರೆ ಬೇರೆ ವಿಭಾಗಗಳಿವೆ (Tyre section, electronic section ಇತ್ಯಾದಿ) ಅದಕ್ಕೆಂದೆ ಕ್ಲೀನರ್ಸ್, ಮೆಕಾನಿಕ್ಸ್, ವಾಶರ್ಸ್, Sweepers ಎಲ್ಲರು ಇದ್ದಾರೆ. ಇವೆಲ್ಲ ಖಾಸಗಿಯವರಿಂದ ಸಾಧ್ಯವೆ?

*10. ಬಸ್‌ನಲ್ಲಿ ಮಹಿಳೆಯರಿಗಾಗುವ ಲೈಂಗಿಕ ಕಿರುಕುಳವನ್ನು ನೀವು ಸಮಸ್ಯೆಯಾಗಿ ಪರಿಗಣಿಸುತ್ತೀರಾ? ಸಮಸ್ಯೆಯನ್ನು ಯಾವ ರೀತಿ ಎದುರಿಸಬಹುದು?*

ಲೈಂಗಿಕ ಕಿರುಕುಳ ನಿಜಕ್ಕು ಒಂದು ಸಮಸ್ಯೆಯೇ ಹೌದು. ಕಿರುಕುಳ ಕೊಡುವುದು, ಮಹಿಳೆಯರಿಗೆ ಇರುವ ಸೀಟನ್ನು ಬಿಡದೆ ಇರುವುದು - ಇಂತಹ ಸಮಸ್ಯೆ ಬಂದಾಗ ಮಹಿಳೆಯರು ನಿರ್ವಾಹಕರಿಗೆ ಹೇಳಬೇಕು. ಈ ರೀತಿ ತೊಂದರೆ ಬಂದಾಗ ಎಷ್ಟೋ ಸಾರಿ ನಾನು ಬಸ್ ನಿಲ್ಲಿಸಿ, ಪೋಲಿಸ್ ಠಾಣೆಗೆ ಒಯ್ದಿದ್ದೇನೆ. ಜಗಳವಾಡಿ ಸುಮ್ಮನೆ ಕೂರಿಸಿದ್ದೇನೆ. ಮಹಿಳೆಯರು

ಧೈರ್ಯವಾಗಿ ಬಯ್ಯುವುದನ್ನು ಕಲಿಯಬೇಕು. ಸಮಯ ಬಂದರೆ ನಾಲ್ಕು ಬಾರಿಸುವ ತಾಕತ್ತನ್ನೂ ಬೆಳೆಸಿಕೊಳ್ಳಬೇಕು. ಆಗಲೇ ಸಮಸ್ಯೆಯನ್ನು ಎದುರಿಸಲು ಸಾಧ್ಯ.

***11. ಮಹಿಳಾ ನಿರ್ವಾಹಕಿಯರು ಮಹಡಿ ಬಸ್‌ಗಳಲ್ಲಷ್ಟೇ ಏಕೆ ಕೆಲಸ ಮಾಡುತ್ತಾರೆ?***

ಮಹಡಿ ಬಸ್‌ಗಳಲ್ಲಿ ಒಂದೇ ಬಾಗಿಲಿರುವುದರಿಂದ ನೂಕುನುಗ್ಗಲು ಕಮ್ಮಿ ಇರುತ್ತದೆ. ಸಾಮಾನ್ಯವಾಗಿ ಮಹಡಿ ಬಸ್‌ನಲ್ಲಿ ರಶ್ ಇರುವುದಿಲ್ಲ. ಆದುದರಿಂದ ಮಹಡಿ ಬಸನ್ನಲ್ಲಷ್ಟೆ ನಾವು ಕೆಲಸ ಮಾಡುವುದು, ನಿರ್ವಾಹಕಿಯರಿರುತ್ತಿದ್ದರು. ಕೆಳಗಡೆ ಪುರುಷ ನಿರ್ವಾಹಕರಿರುತ್ತಿದ್ದರು. ಈಗ ಎರಡು ಕಡೆ ಇರುತ್ತೇವೆ.

***12. ಮಹಡಿ ಬಸ್‌ಗಳ ಸಂಖ್ಯೆ ತುಂಬಾ ಕಡಿಮೆ? ಮೇಲ್ವಿಚಾರಣೆಯೂ ದುಬಾರಿ. ಹೀಗಾಗಿ ಮಹಡಿ ಬಸ್‌ಗಳನ್ನು ತೆಗೆದು ಹಾಕಿದರೆ ಏನು ಮಾಡುತ್ತೀರಿ?***

ನಮ್ಮನ್ನು Single ಬಸ್‌ಗಳಲ್ಲಿ ಹಾಕುವುದೇ ಇಲ್ಲ. ಮಹಡಿ ಬಸ್‌ಗಳೆ ಇಲ್ಲವೆಂದರೆ Officeನಲ್ಲಿ ಕೆಲಸ ಮಾಡಲು ಹಾಕುತ್ತಾರೆ. Single ಬಸ್‌ಗಳಲ್ಲಿ ಕೆಲಸ ಮಾಡುವುದು ಅನಿವಾರ್ಯವೆ ಆದರೆ ಮಾಡಲೇ ಬೇಕಲ್ಲವೆ?

**- ಸರಸ್ವತಿ ದು.**

---

*(19ನೇ ಪುಟದಿಂದ ಮುಂದುವರಿದಿದೆ)*

ಗರ್ಭಿಣಿಯರಾಗುತ್ತಾರೆಂದರೆ "ರೇಪ್"ಗೆ ಒಳಗಾಗುತ್ತಾರೆಂದೇ ಅರ್ಥ. ಇಂಥವರನ್ನು ರೇಪ್ ಮಾಡುವವರಿದ್ದಾರೆಯೆ ಎಂದು ಹುಬ್ಬೇರಿಸಬೇಡಿ, ಇದ್ದಾರೆ. ಆದ್ದರಿಂದ ಇವರು ಗರ್ಭಿಣಿಯರಾಗುವುದೆಂದರೆ, ಅತ್ಯಾಚಾರಕ್ಕೆ ಒಳಗಾಗಿ ಗರ್ಭಿಣಿಯರಾಗಬಹುದಾದ ಮಾನಸಿಕ ರೋಗಿಗಳ ಗರ್ಭಕೋಶವನ್ನೇ "ಕಿತ್ತು ಹಾಕಿ" ಅವರನ್ನು ಕಾಪಾಡಿದೆನೆಂದುಕೊಳ್ಳುವ ಭಾವನೆಗೂ, ಪ್ರಕೃತಿ ಹೆಣ್ಣಿಗೆ ನೀಡಿರುವ ಹಕ್ಕನ್ನು ಕಿತ್ತುಕೊಳ್ಳಲಾಗಿದೆ ಎಂಬ ಭಾವನೆಗೂ ನಡೆದ ಸಂಕೀರ್ಣ ಘರ್ಷಣೆಯೇ ಈ ಮಹಿಳಾ ಸಂಘಟನೆಗಳು ಧ್ವನಿಯೆತ್ತಲು ಕಾರಣವಾಗಿದೆ. ಈ ಧ್ವನಿಯನ್ನು ಬಿಚ್ಚಿಟ್ಟಷ್ಟೂ ಅದು ಬಿಚ್ಚಿಕೊಳ್ಳುತ್ತದೆ. ಏಕೆಂದರೆ ಇವರ ಮೇಲೆ ನಡೆಯುವ ಅತ್ಯಾಚಾರದ ದೈಹಿಕ ಪರಿಣಾಮವನ್ನು ಅಂದರೆ ಬಸಿರಾಗುವುದನ್ನು ಈ ಶಸ್ತ್ರ ಚಿಕಿತ್ಸೆಗಳು ತಡೆಯಬಲ್ಲವೇ ಹೊರತು ಅವರ ಮೇಲಾಗುವ ಮಾನಸಿಕ ಪರಿಣಾಮಕ್ಕೆ ಇವು ಕುರುಡಾಗಿವೆ.

ಈ ಮಾನಸಿಕ ರೋಗಿಗಳಿಗೆ ತಮ್ಮ ತಿಂಗಳ ಮುಟ್ಟನ್ನೇ ನಿಭಾಯಿಸುವ ಸ್ವಾಸ್ಥ್ಯವಿಲ್ಲದಿರುವುದರಿಂದ ತಿಂಗಳ ಮುಟ್ಟಿಗೆ ಕಾರಣವಾಗುವ ದೈಹಿಕ ರಚನೆಯನ್ನೆ ಕಿತ್ತುಹಾಕಿ ಬಿಡುವುದು ಒಂದು ಮಾರ್ಗೋಪಾಯವಿರಬಹುದು. ಆದರೆ ಮಲವಿಸರ್ಜನೆ ಮೂತ್ರ ವಿಸರ್ಜನೆಯಂತೆಯೇ ತಿಂಗಳ ಮುಟ್ಟನ್ನು ಒಂದು ನೈಸರ್ಗಿಕ ವಿಸರ್ಜನೆ ಎಂದು ಪರಿಗಣಿಸಿದಾಗ ಇದನ್ನೇನೋ ಶಸ್ತ್ರಚಿಕಿತ್ಸೆಯ ಮೂಲಕ ನಿವಾರಿಸಬಹುದು. ಆದರೆ ಅವುಗಳಿಗೇನು ಮಾಡುವುದು, ಮಾನಸಿಕ ರೋಗಿಗಳಿಗೆ ಆ ನೈಸರ್ಗಿಕ ವಿಸರ್ಜನೆಗಳನ್ನು ನಿಭಾಯಿಸುವುದೂ ಕಷ್ಟವೇ ಅಲ್ಲವೇ ಎಂದು ಈ ಚಳುವಳಿಗಾರರು ಪ್ರಶ್ನಿಸುತ್ತಾರೆ. ಚಳುವಳಿಯ ಮುಂಚೂಣಿಯಲ್ಲಿರುವ ಅಹಲ್ಯಾ ರಂಗೇಕರ್ ಹೇಳುತ್ತಾರೆ, "ಮಾನಸಿಕ ರೋಗಿಗಳ ಸಂಪೂರ್ಣ ಜವಾಬ್ದಾರಿ ಈಗ ಸರ್ಕಾರದ್ದೇ ಆಗಿರುವುದರಿಂದ ಅತ್ಯಾಚಾರ ಅಥವಾ ಅದರ ಪರಿಣಾಮದಿಂದ ಅಂತಹವರನ್ನು ಕಾಪಾಡುವ ಏಕೈಕ ಮಾರ್ಗ ಇದೊಂದೆಯೇ? ಏಕೆಂದರೆ ಅವರಿಗಾಗಿ ಏರ್ಪಡಿಸಿರುವ ಚಿಕಿತ್ಸಾಲಯದಲ್ಲಿ ಅವರನ್ನು ಹೀಗಲ್ಲದೇ ಬೇರೆ ರೀತಿ ಕಾಪಾಡಲು ಸಾಧ್ಯವಿಲ್ಲ ಎನ್ನುವುದಾದರೆ ಅಂತಹ ರೋಗಿಗಳನ್ನು ಮನೆಯಲ್ಲಿಟ್ಟುಕೊಳ್ಳುವುದೇ ಒಳ್ಳೆಯದೇನೋ ಅನ್ನಿಸುತ್ತದೆ. ಈ ಎಲ್ಲ ಹಿನ್ನೆಲೆಯಲ್ಲಿ ನಾವು ಕಂಡು ಕೇಳರಿಯದ ಮಾನಸಿಕ ರೋಗಿಗಳ ಬಗ್ಗೆ ಕುತೂಹಲ ಮೂಡಿ ಇದರ ಬಗ್ಗೆ ಮತ್ತಷ್ಟು ಚರ್ಚೆ ವಾಗ್ವಾದಗಳಿಗೆ ಅವಕಾಶ ಕೊಟ್ಟಿರುವುದೆ ಈ ಶಸ್ತ್ರ ಚಿಕಿತ್ಸೆಯ ಬಗ್ಗೆ ಚರ್ಚೆ ಎತ್ತಿರುವುದು ಮಹಿಳಾ ಚಳುವಳಿಗಳ ಕೊಡುಗೆಯಾಗಿದೆ.

*- (ಆಧಾರ : ಟೈಮ್ಸ್ ಆಫ್ ಇಂಡಿಯಾ ಕೃಪೆ)*

# ಮಹಿಳಾ ನಿರ್ವಾಹಕಿಯ ಕೆಲಸ ವಿಭಿನ್ನವಾದುದು

***ಕುಮಾರಿ ಮಂಜುಳಾ, 1993ರಿಂದ K.S.R.T.C ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿರುವ ಮಹಿಳಾ ಕಾರ್ಮಿಕರಲ್ಲಿ ಕಿರಿಯಳಾದ ಮಂಜುಳ ಧೈರ್ಯಸ್ಥೆ, ಸದಾ ಚಟುವಟಿಕೆಯಿಂದಿರುವ ವ್ಯಕ್ತಿ. ಅನ್ನ ಕೊಡುವ ಸಂಸ್ಥೆಗೆ ನಿಯತ್ತಿನಿಂದ ದುಡಿಯಬೇಕೆನ್ನುವ ನಿಷ್ಠಾವಂತೆ, ತನ್ನಲ್ಲಿದ್ದ ಸಾಹಸ ಪ್ರವೃತ್ತಿಯೆ ಈ ಕೆಲಸಕ್ಕೆ ಸೇರುವಂತೆ ಮಾಡಿದ್ದು ಎನ್ನುವ ಆಕೆಗೆ 'ಓದು' ಪ್ರಿಯವಾದ ಹವ್ಯಾಸ. ತನ್ನದೆ ವಿಶೇಷ ರೀತಿಯಲ್ಲಿ ಕೆಲಸ ನಿರ್ವಹಿಸುವ ಈಕೆ, ತಮ್ಮ ಅನುಭವವನ್ನು ಮಾನಸ ಓದುಗರಿಗೆಂದು ಬರೆದು ಕಳಿಸಿದ್ದಾರೆ.***

1991ರ ಡಿಸೆಂಬರ್ ತಿಂಗಳಲ್ಲಿ ಗೆಳೆಯನೊಬ್ಬ ಅನಿರೀಕ್ಷಿತವಾಗಿ ಸಿಕ್ಕಿ, "ಸೆಂಟ್‌ಜಾನ್ಸ್ ಅಂಬುಲೆನ್ಸ್ ಅಸೋಸಿಯೇಷನ್'ರವರ ಪ್ರಥಮ ಚಿಕಿತ್ಸಾ ಶಿಬಿರದಲ್ಲಿ ತರಬೇತಿ ಪಡೆದು ಸರ್ಟಿಫಿಕೇಟ್ ಪಡೆದರೆ, ನಿರ್ವಾಹಕರ ಹುದ್ದೆ ಸಿಗುತ್ತದೆ" ಎಂದಾಗ, ಓದಿದ್ದ ಬರೀ ಎಸ್.ಎಸ್.ಎಲ್.ಸಿ.ಗೆ ಸರ್ಕಾರಿ ಕೆಲಸ ಸಿಗುತ್ತದೆ ಎಂದಾಗ, ಸಹಜ ಖುಷಿಯಿಂದ ಪ್ರಥಮ ಚಿಕಿತ್ಸಾ ಶಿಬಿರದಲ್ಲಿ ಭಾಗವಹಿಸಿ, ಸರ್ಟಿಫಿಕೇಟನ್ನು ಪಡೆದು, 1992 ಜನವರಿಯಲ್ಲಿ ಬೆ.ನಾ.ಸಾಗೆ ಅರ್ಜಿ ಹಾಕಿ, 1993ರ ಫೆಬ್ರವರಿ 17ರಂದು ನಿರ್ವಾಹಕಿಯಾಗಿ ಆಯ್ಕೆಗೊಂಡೆ.

ಕೆಲಸಕ್ಕೆ ಸೇರಿದ ಹೊಸದರಲ್ಲಿ ಬಹಳ ಗಮನ ಸೆಳೆದ ಈ ಕೆಲಸ, ನಂತರ ಈ ಜನಗಳ ಹುಚ್ಚು ಪ್ರಶ್ನೆ, ಹುಚ್ಚುತನಗಳಿಂದ ಮನ ನೋಯಿಸಿದ್ದೂ ಇದೆ. ಎಲ್ಲಿಗೆ ಹೋಗುತ್ತೇ? ಎಲ್ಲಿಗೆ ಹೋಗುತ್ತೆ? ಇದೇ ಪ್ರಶ್ನೆ. ಅವರ ಮುಂದೇನೇ 'ಮಾರುಕಟ್ಟೆ, ಮಾರುಕಟ್ಟೆ' ಎನ್ನುತ್ತಿದ್ದರೂ, ಮತ್ತೆ ಮತ್ತೆ ಅದೇ ಪ್ರಶ್ನೆ, ನಾವು ಅವರ ಹತ್ತಿರ ಹೋಗಿ ನಿಂತಾಗ (ಟಿಕೇಟ್ ಕೇಳಲು) ಆಗ ನನ್ನನ್ನು ಅಡಿಯಿಂದ ಮುಡಿಯವರೆಗೂ ನೋಡಿ, ಆಗ ಎಲ್ಲಾ ಜೇಬುಗಳನ್ನು ಹುಡುಕಾಡಿ, 10, 5 ರೂಗಳ ನೋಟುಗಳನ್ನು ಕೊಟ್ಟು, ಸುಮ್ಮನೇ ನಮ್ಮ ಮುಖ ನೋಡುತ್ತಾ ಇರುವುದು, ಎಲ್ಲಿಗೆ ಹೋಗಬೇಕು? ಎಷ್ಟು ಟಿಕೇಟ್‌ಗಳು ಬೇಕು? ಏನೋ ಹೇಳೋಲ್ಲ? ಏಕೆಂದರೆ ಕಂಡಕ್ಟರ್‌ಗಳಿಗೆ ಇವರ ಮನಸ್ಸೆಲ್ಲಾ ತಿಳಿಯುತ್ತದಲ್ಲಾ? ಆಗಂತೂ ನನಗೊ ಹೇಳಲಾರದಷ್ಟು ಸಿಟ್ಟು. ಬಸ್ ಬಂದೊಡನೇ ಓಡಿ, ಓಡಿ ಬಸ್ ಹತ್ತಕ್ಕೆ ತಿಳಿಯುತ್ತದೆ. ಕಂಡಕ್ಟರ್‌ಗೆ ರೋಪ್ ಹಾಕಲು ತಿಳಿಯುತ್ತದೆ. ಆದರೆ ಬಸ್ಸ್ ಹತ್ತಿದ ಮೇಲೆ, ಕಂಡಕ್ಟರ್ ಬರುತ್ತಾರೆ, ಟಿಕೇಟ್ ತೆಗೆದುಕೊಳ್ಳಬೇಕೆಂಬುದು ಮಾತ್ರ ತಿಳಿಯೋಲ್ಲ. ಮೇಲಾಗಿ ಎಲ್ಲರೂ ವಿದ್ಯಾವಂತರೇ, ಇಷ್ಟೇ ಅಲ್ಲದೇ, ಒಬ್ಬೊಬ್ಬರು ನಾವು ಟಿಕೇಟ್ ಕೊಡುವಾಗ ಅನಾವಶ್ಯಕವಾಗಿ ನಮ್ಮ ಕೈಯನ್ನು ಮುಟ್ಟುತ್ತಾರೆ. ಅದರಲ್ಲಿ ಅವರಿಗೆ ಅದೇನು ಸುಖ ಸಿಗುತ್ತದೋ ಆ ದೇವರಿಗೆ ಗೊತ್ತು.

ಒಮ್ಮೆಯಂತೂ ಇದೇ ರೀತಿ ಆಯಿತು. ಒಬ್ಬಾತ ಕಾಲೇಜು ಹುಡುಗ. ಏನು ನನ್ನ ತಮ್ಮನಿಗಿಂತ ಚಿಕ್ಕವನೇ ಇರಬೇಕು. ಬಾಗಿಲಿನಲ್ಲಿ ನಿಂತಿದ್ದ. ರಷ್ ಇದ್ದುದರಿಂದ ನಾನೇನು ಒಳಗೆ ಬರಲು ಬಲವಂತ ಮಾಡಲಿಲ್ಲ. ನಾನು ನನ್ನ ಸೀಟಿನಲ್ಲಿ ಕುಳಿತಿದ್ದೆ. ಆತ ನನ್ನ ಪಕ್ಕನೇ ನಿಂತಿದ್ದ. ಸ್ವಲ್ಪ ಗೊತ್ತಾದ ಮೇಲೆ ಅವನು ನನ್ನ ಕೈ ಸವರುತ್ತಿದ್ದ. ಆಗ ಒಳಗೆ ಕರೆದು, ಎಲ್ಲರೂ ಇಳಿದ ಮೇಲೆ ನನ್ನ ಕೈ ಪೂರ ಅವನ ಹತ್ತಿರ ಚಾಚಿ, "ಈಗ ಸವರು, ನಿನಗೆ ಅದೇನು ಸಿಗುತ್ತದೋ ಸಿಗಲಿ" ಎಂದೆ. ಇನ್ನೊಂದು ಕ್ಷಣ ಆತ ಅಲ್ಲಿದ್ದರೇ? ಸಾರಿ ಹೇಳಿ ಓಡಿ ಹೋದ.

ಹೀಗೆ ಅನೇಕ ರೀತಿಯ ಜನ ಬರುತ್ತಾರೆ. ಒಳ್ಳೆಯವರೂ ಇರುತ್ತಾರೆ, ಯಾರಾದರೂ ಜಗಳ ಶುರು ಮಾಡಿದರೇ ಒಳ್ಳೆಯವರು. ನನ್ನ ಸಪೋರ್ಟಿಗೆ ಬರುತ್ತಾರೆ. ಜಗಳ ಆಡುತ್ತಿರುವವರಿಗೆ ಬಾಯಿ ಮುಚ್ಚಿಸುತ್ತಾರೆ. ಹೀಗೆ ನಾನಾ ವಿಧ.

ಇನ್ನು ಚಿಲ್ಲರೆ ಸಮಸ್ಯೆ. ಇದರ ಬಗ್ಗೆ ನಮಗೆ ಜಗಳ ಆಡಿ, ಆಡಿ, ಸಾಕಾಗಿದೆ. 75 ಪೈಸೆ ಟಿಕೇಟಿಗೆ 5 ರೂ ಅಥವಾ 10ರೂ ಕೊಡುತ್ತಾರೆ. ಇನ್ನೇನು ಮುಂದಿನ ಸ್ಟಾಪ್‌ನಲ್ಲಿ ಅವರು ಇಳಿಯಬೇಕು. ಅಷ್ಟೋತ್ತಿಗೆ ಆ ದುಡ್ಡನ್ನು ಎಣಿಸಿ, ಅವರಿಗೆ ಕೊಡಲಾಗುವುದಿಲ್ಲ. (ಬೇರೆಯವರಿಗೆ ಟಿಕೇಟ್‌ಕೊಡಬೇಕು, ಎಂಟ್ರಿ ಹಾಕಬೇಕು, ಈ ಕೆಲಸ ಎಲ್ಲಾ ನಮಗಿರುತ್ತದಲ್ಲವಾ?) ಚಿಲ್ಲರೆ ಕೊಡಿ ಎಂದರೆ "ನೀವೇ ಕಂಡಕ್ಟರ್ ಆಗಿ, ನಮ್ಮನ್ನು ಚಿಲ್ಲರೆ ತನ್ರಿ ಎನ್ನುತ್ತೀರಾ, ನೀವೇ ತನ್ನಿ ಎನ್ನುತ್ತಾರೆ. ನಮ್ಮ ಸಂಸ್ಥೆಯ ಕಾನೂನಿನ ಪ್ರಕಾರ ಕಂಡಕ್ಟರ್ ಸಂಸ್ಥೆಯ ಹಣವಲ್ಲದೇ 5 ರೂ ಕೂಡ ಹೆಚ್ಚಿಗೆ ಇಡುವಂತಿಲ್ಲ. (ಪರ್ಸನಲ್ ಕ್ಯಾಶ್). ಇದನ್ನೆಲ್ಲಾ ಇವರು ಇಳಿಯುವ ಇನ್ನೊಂದು ಸ್ಟಾಪಿನಷ್ಟೋತ್ತಿಗೆ ತಿಳಿಸಿ, ನಾನು ನನ್ನ ಕೆಲಸ ಮಾಡಲು ಸಾಧ್ಯವೇ?

ಇನ್ನು ನಾವು ಕೆಲಸ ನಿರ್ವಹಿಸುವ ಬಗ್ಗೆ, ನನ್ನ ಬಸ್ಸಿನಲ್ಲಿ ಫುಟ್‌ಬೋರ್ಡಿನ ಮೇಲೆ ಯಾರೂ ನಿಲ್ಲುವಂತಿಲ್ಲ. ಒಳಗೆ ಬರಲು ಇಷ್ಟ ಇದ್ದರೆ ಟಿಕೇಟ್ ಕೊಡುವುದು. ಫುಟ್‌ಬೋರ್ಡಿನ ಮೇಲೆ ನಿಲ್ಲುವಂತಿದ್ದರೇ ಟಿಕೇಟ್ ಕೊಡುವುದಿಲ್ಲ, ಬಸ್ಸಿನಲ್ಲಿ ನಿಲ್ಲಲೂ ಬಿಡುವುದಿಲ್ಲ. ಅಲ್ಲಿಗೂ ಹಟ ಮಾಡಿದರೇ, ಟಿಕೇಟ್ ವಾಪಸ್ಸು ತೆಗೆದುಕೊಂಡು, ಅವರ ಹಣ ವಾಪಸ್ಸು ಕೊಟ್ಟು, ಬಸ್ ನಿಲ್ಲಿಸಿ, ಕೆಳಗಿಳಿಸುತ್ತೇನೆ, ಮತ್ತೆ ನನ್ನ ಬಸ್ಸಿನಲ್ಲಿ ಯಾರೂ ಬೀಡಿ, ಸಿಗರೇಟ್ ಸೇದುವಂತಿಲ್ಲ, ಕಡಲೇಕಾಯಿ ಸಿಪ್ಪೆ, ಕಸ, ಕಡ್ಡಿ ಹಾಕುವಂತಿಲ್ಲ. ಹಾಕಿದರೇ ಅವರೇ ಎತ್ತಿ ಬಿಸಾಕಿ ಹೋಗಬೇಕು. ಕಡಲೇ ಕಾಯಿಯನ್ನು ಜೇಬಿನಲ್ಲಿ, ಕರ್ಚೀಫಿನಲ್ಲಿ ಇಟ್ಟುಕೊಳ್ಳುವುದಕ್ಕೆ ಆಗುತ್ತದೆ, ಆದರೆ ಅದರ ಸಿಪ್ಪೆಯನ್ನು ಮಾತ್ರ ಬಸ್ಸಿನಲ್ಲಿ ಹಾಕುವುದು. ಏಕೆಂದರೆ ಸರ್ಕಾರಿ ಬಸ್ಸೆಂದರೆ 'ನಗರ ಪಾಲಿಕೆಯ ತಿಪ್ಪೆ' ಇದ್ದಂತೆ ಈ ಜನಗಳಿಗೆ, ಹೀಗೆ ನಾನಾ ರೀತಿಯ ನಾನಾ ವಿಧದ ಜನ ಬರುತ್ತಾರೆ.

ಒಟ್ಟಿನಲ್ಲಿ ಕಷ್ಟ, ಸುಖ ಎರಡೂ ಒಟ್ಟೊಟ್ಟಿಗೆ ಬರುತ್ತದೆ. ಎಲ್ಲಕ್ಕೂ ಹೊಂದಿಕೊಂಡಿರಬೇಕು.

ಮಂಜುಳ ಇ.
*ನಿರ್ವಾಹಕಿ, K.S.R.T.C.*

* * *

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067